ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೫೧ ಫೆಬ್ರವರಿ ೨೦೧೫ ಸಂಚಿಕೆ : ೦೨

ಶ್ರೀಕ್ಷೇತ್ರದ ಆರಾಧ್ಯದೈವ
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ರಥೋತ್ಸವ





ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕ:
ಹೆಚ್.ಬಿ. ಗಂಗಾಧರಯ್ಯ

ವಿತರಣೆ :
ಆರ್.ಎಸ್. ಮಲ್ಲೇಶಪ್ಪ

ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104
ದೂ: 0816-2282322.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ: ೫೧ ಫೆಬ್ರವರಿ ೨೦೧೫ ಸಂಚಿಕೆ: ೦೨

ಒಳಪುಟಗಳಲ್ಲಿ ......................



ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 12.00

## ಪದ್ಮಭೂಷಣ - ಶ್ರೀ ಶ್ರೀಗಳು

ಸಂ ಪಾ ದ ಕೀ ಯ

'ಮಕ್ಕಳಲ್ಲಿ ದೇವರನ್ನು ಕಾಣುವ ವಾತ್ಸಲ್ಯ ಪುಣ್ಯಮೂರ್ತಿ, ಕಾಯಕಯೋಗಿ, ದಾಸೋಹ ದ್ರಷ್ಟಾರ, ಅಧ್ಯಯನ ತಪಸ್ವಿ, ಪಶುಪಕ್ಷಿ ಪ್ರೇಮಿ, ಸಸ್ಯ ವೃಕ್ಷ ಸ್ನೇಹಿ, ಬಸವತತ್ವನಿಷ್ಠ, ಲಿಂಗಾಪೂಜಾನುರಾಗಿ, ಮಿತಾಹಾರಿ, ಅವಿರಳ ರಾಷ್ಟ್ರಚಿಂತಕ, ಅಸ್ಖಲಿತವಾಗ್ಮಿ, ಕಾವಿಯುಡುಗೆಯ ಕನಕಾಚಲ, ಸ್ವಾಮಿಕುಲತಿಲಕ, ಹಸಿವುತೃಷೆ ನಿದ್ರೆಗಳನ್ನು ಗೆದ್ದಿರುವ ಅಸಾಮಾನ್ಯ ವಿಭೂತಿಸಿರಿ, ತ್ರಿವಿಧ ದಾಸೋಹಿ, ಬಸವಶ್ರೀ ಪ್ರಶಸ್ತಿ ಪುರಸ್ಕೃತ, ಲೋಕಜಂಗಮ, ಕರ್ನಾಟಕರತ್ನ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಕೇಂದ್ರ ಸರ್ಕಾರ 'ಪದ್ಮಭೂಷಣ' ಪ್ರಶಸ್ತಿಯನ್ನರ್ಪಿಸಿ ಧನ್ಯಭಾವ ತಳೆದಿದೆ. ಅಖಂಡ ಭಾರತದ ಮನದಲ್ಲಿ 'ನಡೆದಾಡುವ ದೇವರಾಗಿರುವ' ಶ್ರೀಗಳವರು ಪ್ರಶಸ್ತಿ ಪದವಿ ಗಳಿಂದ ದೂರನಿಂತವರು. ಎಲ್ಲ ಪ್ರಶಸ್ತಿಗಳಿಗಿಂತ ಎತ್ತರದಲ್ಲಿರುವವರು. 'ಭಾರತರತ್ನ' ಪ್ರಶಸ್ತಿಯಿಂದಲೇ ಅಲಂಕೃತರಾಗಬೇಕೆಂಬುದು ಭಕ್ತಕೋಟಿಯ ಅಪೇಕ್ಷೆ. 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' – ಎಂಬ ವಿನಯವಾರಿಧಿಯಾಗಿರುವವರು ಶ್ರೀ ಶ್ರೀಗಳವರು 'ಸ್ಥಿತಪ್ರಜ್ಞರು'.

ದಿನಾಂಕ 15-01-2015ರಂದು ಶ್ರೀಮಠದಲ್ಲಿ ಆಯೋಜಿತವಾಗಿದ್ದ ಪರಮಪೂಜ್ಯ ಶ್ರೀ ಅಟವೀಸ್ವಾಮಿಗಳವರ 114ನೆಯ ಮತ್ತು ಪರಮಪೂಜ್ಯ ಶ್ರೀ ಶ್ರೀ ಉದ್ದಾನಶಿವ ಯೋಗಿಗಳವರ 74ನೆಯ ಪುಣ್ಯ ಸ್ಮರಣೋತ್ಸವದಲ್ಲಿ ಉಪನ್ಯಾಸ ನೀಡುತ್ತ ಶ್ರೀಮಠದ ಹಳೆಯ ವಿದ್ಯಾರ್ಥಿ, ನೃಪತುಂಗ ಪ್ರಶಸ್ತಿ ವಿಜೇತರಾದ ಡಾ॥ ಕುಂ.ವೀರಭದ್ರಪ್ಪನವರು 'ಬಾಯಿಪಾಠ ಸಂಸ್ಕೃತಿ ಕಳೆದುಹೋಗುತ್ತಿರುವುದರಿಂದಲೇ ಭಗವದ್ಗೀತೆ ಬಗ್ಗೆ ಅಪಶೃತಿಗಳು ಕೇಳಿ ಬರುತ್ತಿವೆ. ಸಿದ್ಧಗಂಗಾಮಠದಲ್ಲಿ ಓದುವ ದಿನಗಳಲ್ಲಿ ದಿನನಿತ್ಯ 11-12 ಶ್ಲೋಕಗಳನ್ನು ಬಾಯಿಪಾಠ ಮಾಡುತ್ತಿದ್ದೆ. ಸ್ವಾಮೀಜಿಯಿಂದ ಕೇಳಿದ ಕಥೆಗಳಿಂದ ನಾನೊಬ್ಬ ಉತ್ತಮ ಕಥೆಗಾರನಾಗಲು ಸಾಧ್ಯವಾಯಿತು ಎನ್ನುತ್ತ ಬೆಂಗಳೂರಿನ ಫ್ರೇಜರ್‌ಟೌನ್, ಕಾಕ್ಸ್‌ಟೌನ್‌ನಂತಹ ಶ್ರೀಮಂತ ಬಡಾವಣೆಗಳಲ್ಲಿ ಕಲಿಯುವ ಮಕ್ಕಳು, ಸುಶಿಕ್ಷಿತರು ಪೋಷಕರನ್ನು ವೃದ್ಧಾಶ್ರಮಗಳಿಗೆ ಸೇರಿಸುತ್ತಿದ್ದಾರೆ. ಆದರೆ ಶ್ರೀಮಠದಲ್ಲಿ ಕಲಿತ ವಿದ್ಯಾರ್ಥಿಗಳು ತಂದೆ ತಾಯಿಯವರನ್ನು ಜೊತೆಯಲ್ಲಿ ಇರಿಸಿಕೊಂಡಿದ್ದಾರೆ. ಸಿದ್ಧಗಂಗಾಮಠಕ್ಕೆ ನ್ಯಾಯದಾನ ಮಾಡುವ ನ್ಯಾಯಮೂರ್ತಿಗಳು, ಶಿಕ್ಷೆಗೆ ಒಳಪಟ್ಟ ಅಪರಾಧಿಗಳು, ಸುಖಭೋಗ ಉಂಡ ವ್ಯಕ್ತಿಗಳು ಹಾಗೂ ಪಶ್ಚಾತ್ತಾಪ ಪಡುವ ರಾಜಕಾರಣಿಗಳು ಬಂದು ಹೋಗುತ್ತಾರೆ. ಇದೊಂದು ನೈತಿಕ ಸ್ಥೈರ್ಯ ತುಂಬುವ ಶ್ರೇಷ್ಠ ಸ್ಥಳವಾಗಿದೆ'– ಎಂದರು.

ಫೆಬ್ರವರಿ 11ರಿಂದ 20ರವರೆಗೆ ಶ್ರೀ ಸಿದ್ಧಲಿಂಗೇಶ್ವರ ಜಾತ್ರಾ ಮಹೋತ್ಸವ ಆಯೋಜಿತವಾಗಿದೆ. ದಾಸೋಹದ ಪರಿಷೆ ಎಂದೇ ಹೆಸರಾದ ಶ್ರೀಮಠದ ಜಾತ್ರೆಯನ್ನು ಕಾಲಧರ್ಮಕ್ಕನುಗುಣವಾಗಿ ಪರಮಪೂಜ್ಯ ಶ್ರೀ ಶ್ರೀಗಳವರು ವಸ್ತುಪ್ರದರ್ಶನ, ದೇವರ ಉತ್ಸವಗಳು, ಧಾರ್ಮಿಕೋಪನ್ಯಾಸಗಳು ಮತ್ತು ಗೋಸಲಶ್ರೀ ಮತ್ತು ಸಿದ್ಧಲಿಂಗೇಶ್ವರ ಪ್ರಶಸ್ತಿಗಳನ್ನು ಕೊಡುವ ವ್ಯವಸ್ಥೆ ಮಾಡಿರುತ್ತಾರೆ.

–ಸಂಪಾದಕ







## ಭಗವಂತ ಸಾಕ್ಷಾತ್ಕಾರಕ್ಕೆ ಮಾನವ ಜನ್ಮ ಒಂದು ಸಾಧನ

ಶ್ರೀ ವಾ ಣಿ

ಜೀವರಾಶಿಯಲ್ಲಿ ಮಾನವ ಜನ್ಮ ದೊಡ್ಡದು; ಅದನ್ನರ್ಥ ಮಾಡಿಕೊಳ್ಳದಿದ್ದರೆ ಅನರ್ಥ, ಶಿವದ್ರೋಹ, ಎಲ್ಲ ಸಂತರೂ ಇದೇ ಮಾತನ್ನು ಮೇಲಿಂದ ಮೇಲೆ ಒತ್ತಿ ಹೇಳಿದ್ದಾರೆ. ಸೃಷ್ಟಿಯಲ್ಲೇ ಶಿಖರಪ್ರಾಯವಾಗಿರುವ ಮಾನವನ ಕರ್ತವ್ಯ ಜವಾಬ್ದಾರಿಗಳು ಗುರುತರವಾದುದೆಂಬುದನ್ನು ಅವನು ಅರಿತುಕೊಂಡಿಲ್ಲ. ಎಲ್ಲ ಜೀವರಾಶಿಗಳಿಗೆ ಅವನು ತಂದೆಯ ಸ್ವರೂಪದಲ್ಲಿರುವುದರಿಂದ ಜಗತ್ತಿನ ಅಳಿವು ಉಳಿವುಗಳಿಗೆ ಅವನೇ ಜವಾಬ್ದಾರನಾಗುತ್ತಾನೆ. ಬುದ್ಧಿ ಪ್ರತಿಭಾ ವಿವೇಕ ಭಾವ ಶ್ರೀಗಳು ಅವನಿಗೆ ಮಾತ್ರವೇ ಲಭ್ಯವಾಗಿರುವುದರಿಂದ ವಿಶ್ವಪ್ರಜ್ಞೆಯನ್ನರಿಯುವ ಶಕ್ತಿಯೂ ಅವನಿಗಿರುವುದರಿಂದ, ಮೇಲಾಗಿ ಪ್ರತಿಸೃಷ್ಟಿಯ ಸಾಮರ್ಥ್ಯವೂ ಅವನಿಗೆ ವರವಾಗಿರುವುದರಿಂದ, ಸೃಷ್ಟಿಯ ಪ್ರಗತಿಯಲ್ಲಿ, ದೇವರ ಸಾಮ್ರಾಜ್ಯ ಸ್ಥಾಪನೆಯಲ್ಲಿ ಅವನ ಪಾತ್ರವೇ ಮುಖ್ಯವಾಗುತ್ತದೆ. ಆದ್ದರಿಂದ ಮಾನವ ಜನ್ಮವನ್ನು ಕಡೆಗಣಿಸಬಾರದು.

ಮಾಂಸದ ಮುದ್ದೆ, ಕೀವು ರಕ್ತದ ಕುಡಿಕೆ, ಮೂತ್ರದ ಮಡಿಕೆ ಎಲುಬಿನ ಗೂಡು ಎಂದೆಲ್ಲಾ ತುಚ್ಛೀಕರಿಸಬಾರದು. ನಿಕೃಷ್ಟವಾಗಿ ಕಾಣಬಾರದು. ಪಾಪದ ಫಲವೇ ಮಾನವ ಜನ್ಮವೆಂಬ ಭಾವನೆಯನ್ನು ತಾಳಬಾರದು. ಮಾನವ ಜನ್ಮ ಭಗವಂತನ ಸೃಷ್ಟಿಯಲ್ಲಿ ಅದ್ಭುತವಾದುದು, ವಿಶಿಷ್ಟವಾದುದು, ಅತ್ಯಂತ ಶ್ರೇಷ್ಠವಾದುದು. ಪರಮಾತ್ಮ ಮಾನವನಿಗೆ ಇತರ ಪ್ರಾಣಿಗಳಿಗೆ ಕೊಡದ ಅನೇಕ ದಿವ್ಯಶಕ್ತಿಗಳನ್ನು ಕೊಟ್ಟಿದ್ದಾನೆ. ಆದ್ದರಿಂದ ಅವನ ಸ್ಥಾನ ಸೃಷ್ಟಿಯಲ್ಲಿ ಮಿಗಿಲು. ಅಂತಹ ರತ್ನಪ್ರಾಯ ಜೀವನವನ್ನು ಉಳಿಸಿಕೊಂಡು ಬೆಳೆಸಿಕೊಂಡು ಸದ್ವಿನಿಯೋಗಪಡಿಸಬೇಕು. ಜೀವನವನ್ನು ಅರ್ಥಮಾಡಿಕೊಳ್ಳುವುದು ಮಾನವನ ಪ್ರಥಮ ಕರ್ತವ್ಯ. ವಿಚಾರವಂತ ವಿಜ್ಞಾನಿಗಳೂ ಈ ಕಡೆ ಗಮನ ಹರಿಸಿದ್ದಾರೆ. ಮನುಷ್ಯ ಬಾಳುವುದು ಏಕೆ ? ಹಣಕ್ಕೋ ಆಸ್ತಿಗೋ ಅಧಿಕಾರಕ್ಕೋ ಯಾವುದಕ್ಕೆ ಎಂಬ ಅನೇಕ ವಿಚಾರಗಳು ತಲೆಯೆತ್ತಿ ಕೊನೆಗೆ ದೇಹ ಆತ್ಮದ ಪೀಠ ಎಂಬ ನಿಲುವಿಗೆ ಬಂದು ನಿಂತಿದ್ದಾರೆ.

***(ಕೃಪೆ : ಸಿದ್ಧಗಂಗೆಯ ಶಿವನಿಧಿ – ಡಾ.ದೇಜಗೌ – ಪ್ರಕಾಶನ – ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತು(ರಿ)–1528 – ಅನಿಕೇತನ ರಸ್ತೆ– ಕುವೆಂಪುನಗರ–ಮೈಸೂರು)***



## ಶ್ರೀ ಸಿದ್ಧಲಿಂಗೇಶ್ವರ ವಚನ

**ಹೃದಯ ಕಮಲ ಕರ್ನಿಕಾ ವಾಸದಲ್ಲಿ**
**ದಿಟಪುಟಜ್ಞಾನ ಉದಯವಾಗಿ, ಧಿಕ್ಕರಿಸಲಾಗಿ**
**ಸಟೆದೂತವಾಗಿ, ನಿವರ್ಜಿತವಾದವು ನೋಡಾ,**
**ಕುಟಿಲಕುಹಕ ಅಟಮಟ ಅಭ್ರಛಾಯವಳಿದು ಹೋಗದಮುನ್ನ**
**ಸ್ಫಟಿಕಪ್ರಜ್ವಲಾಕಾರವಾಯಿತ್ತು ನೋಡಾ**
**ಆ ಶಿವಜ್ಞಾನ ಪ್ರಭೆಯೊಳಗೆ ನಿಟಿಲ ಲೋಚನನೆಂಬ ನಿತ್ಯನ**
**ಕಂಡು ಅದೇ ಎನ್ನ ನಿಜವೆಂದು ಬೆಳಸಿ, ಸುಖಿಯಾಗಿರ್ದೆನಯ್ಯಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ**

ಹೃದಯ ಕಮಲ ಮಂದಿರದಲ್ಲಿ ನಿಶ್ಚಯವಾದ ಲಿಂಗವು, ವ್ಯಕ್ತವಾದಂಗವು, ಸುಜ್ಞಾನವು ಉತ್ಪತ್ಯವಾಗಿ, ದೇಹಭಾವ ಪ್ರಪಂಚವನು ತಿರಸ್ಕರಿಸಲಾಗಿ, ಅನೃತವು ದೂರವಾಗಿ ಬಿಡುಗಡೆಯಾದವು. ಕುಟಿಲಕುಹಕ ಚಾಡಿ ಕರಣೇಂದ್ರಿಯಗಳು ಅಂದರೆ ದೇಹವು ಮೇಘದ ನೆರಳಿನೋಪಾದಿಯಲ್ಲಿ ತೋರಿ ಅಡಗುವಂಥ ಅಟಮಟಕುಟಿಲ ಕುಹಕಗಳು ನಾಶವಾಗುವುದಕ್ಕಿಂತ ಕೂಡಲೆ ಸ್ಫಟಿಕದ ಹರಳಿನೋಪಾದಿಯಲ್ಲಿ ಪ್ರಭಾವಿಸಿ ಬೆಳಗುತ್ತಿಹದು. ಆ ಮಹಾಜ್ಞಾನದ ಪ್ರಕಾಶದಲ್ಲಿ ಹಣೆಗಣ್ಣಿಗ್ನಿಯುಳ್ಳಂಥ ಪರಶಿವಲಿಂಗವು ಶಾಶ್ವತ ಸ್ವರೂಪವಾದಂಥ ಪರಶಿವಲಿಂಗವನು ನೋಡಿ ಆ ಪರಬ್ರಹ್ಮವು ಎನ್ನ ಸ್ವರೂಪವೆಂದು ಕೂಡಿ ಭಿನ್ನವಿಲ್ಲದ ಪರಿಣಾಮಿಯಾಗಿದ್ದೆನಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಲೋಕಕಲ್ಯಾಣದಲಿ ಆತ್ಮಕಲ್ಯಾಣವ
ಏಕಗೊಳಿಸಿರುವಂಥ ನೂತನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮನು ನೋಡುವುದೆ ಕಲ್ಯಾಣ ಕೇಳುವುದೆ ಕಲ್ಯಾಣ
ನೆಗೆದು ಸುಖಿಸುವುದೆ ಕಲ್ಯಾಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಗಲಿರುಳು ವ್ಯಸನದಲಿ ಕಳೆದು ಹೋಗುತಿರುವೆ
ಬಗೆಬಗೆಯ ಬಣ್ಣಕೆ ಮರುಳಾಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿವಸಮಯಕ್ಕಾಧಾರವಾಗಿರುವ ಶಿವಗುರುವೆ
ಶಿವಸಮಯವನುದ್ಧರಿಪ ಶಿವಸೂರ್ಯ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿರ್ಮಾಯ ಶ್ರೀಗುರುವೆ ನಿರ್ಮಳಾಂಗಗುರುವೆ
ನಿರ್ಮಲ ನಿರಂಜನ ನಿಜದಿರವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿವಿಂಗಾಶ್ರಯವಾದ ಅನುಭಾವದರವಟಿಗೆ
ಅನುಪಮ ಬೆಡಗಿನ ನಿಬ್ಬೆರಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಹಜ ಸಂತೋಷಿಯೆ ಸರ್ವನಿರ್ಲಿಪ್ತನೆ
ಬಾಹ್ಯಾಂತರ ಲೋಕ ಬೆಸೆದಿರುವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನನ್ನಿಂದಾಯಿತು ಎನದ ನಾಮಾಡಿದೆನೆನದ
ವಿನಯ ವಿಸ್ತಾರದ ಸಿರಿಗಡಲೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಸಿವು ಹರಿದು ನಿಂದ ತೃಷೆಯು ಬತ್ತಿ ಬಂದ
ಪರಿಣಾಮವೆ ಪಥ್ಯವಾಗರಳಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೊನ್ನಿಗೆ ಹೆಣ್ಣಿಗೆ ಮಣ್ಣಿಗೆ ಬರಲಿಲ್ಲ
ಕಾಯಕ ದಾಸೋಹಕೆ ನೀ ಬಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು

– ಹೆಚ್.ವಿ. ವೀರಭದ್ರಯ್ಯ







# ವಿಮಲ ಜೀವನ

–ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ಸುತ್ತಲಿನ ವಸ್ತುಗಳ ಸೌಂದರ್ಯ ಕಂಡಾಗ ಒಂದು ಸಂಗತಿ ವ್ಯಕ್ತವಾಗುತ್ತದೆ, ಸ್ಪಷ್ಟವಾಗುತ್ತದೆ. ಇಲ್ಲಿ ಇರುವ ಪ್ರತಿ ವಸ್ತು ಆರಂಭವಾಗುತ್ತದೆ, ಅಂತ್ಯಗೊಳ್ಳುತ್ತದೆ. ಈ ವಸ್ತು ಯಾವಾಗ ರೂಪುಗೊಂಡಿತು? ಯಾವಾಗ ಆ ವಸ್ತು ಮರೆಯಾಗುತ್ತದೆ? ಎಂಬುದನ್ನು ನಿಖರವಾಗಿ, ನಿಶ್ಚಿತವಾಗಿ ಹೇಳಬಹುದು. ಏಕೆ? ಆ ವಸ್ತು ಸೀಮಿತ ಮರೆಯಾಗುತ್ತದೆ? ಎಂಬುದನ್ನು ನಿಖರವಾಗಿ, ನಿಶ್ಚಿತವಾಗಿ ಹೇಳಬಹುದು. ಏಕೆ? ಆ ವಸ್ತು ಸೀಮಿತವಾದುದರಿಂದ. ಹುಟ್ಟು-ಸಾವು, ಆದಿ-ಅಂತ್ಯಗಳ ಮಧ್ಯದಲ್ಲಿ ಬದುಕು ಇರುವಿಕೆ! ಬದುಕು 'ಆದಿಯಿಂದ ಹರಿಯಲು ಆರಂಭ; ಅಂತ್ಯದತ್ತ ಅನಂತ ಸತ್ಯದತ್ತ! ಬಯಲಿನತ್ತ.

ನಮ್ಮ ದೇಹವೂ ಹಾಗೆಯೇ. ಹುಟ್ಟಿ ಬೆಳೆದು ಬಾಳಿ ನಾಶವಾಗುತ್ತದೆ. ಅತಿ ಹೆಚ್ಚೆಂದರೆ ನೂರು ವರುಷಗಳಲ್ಲಿ. ಇಷ್ಟೇ ಯೌವ್ವನದ ಏರಿಕೆಯಲ್ಲಿ ಮುಪ್ಪು, ಮರಣದ ಭಾನ ಬರದು. ಆಗ ತರುಣ ಕನಸುಗಳು. ಏನು ಬೇಕಾದರೂ ಮಾಡಬಲ್ಲೆನೆಂಬ ಉಮೇದ! ಅಸಾಧ್ಯ ಎನ್ನುವುದೇ ಕಾಣದು!

ನೆಪೋಲಿಯನ್ ಸಾಮ್ರಾಟ. 'ಅಸಾಧ್ಯ' ಎನ್ನುವುದು ಮೂರ್ಖರ ಶಬ್ದಕೋಶದಲ್ಲಿದೆ ಎಂದು ಹೇಳಿದ. ಆದರೆ ಆ 'ಅಸಾಧ್ಯ' ಎನ್ನುವ ಶಬ್ದ ಕೆಲಕಾಲದ ನಂತರ ಅವನ ಬಾಳಕೋಶದಲ್ಲಿಯೇ ಬಂತು! ಆತ ಸೇಂಟ್ ಹೆಲೆನಾದಲ್ಲಿ ಕೈದಿಯಾದ! ದುಃಖಿಯಾದ. ಕಣ್ಣೀರು ಸುರಿಸುತ್ತಾ ಬದುಕಿರಬೇಕು ಆತ. ಯಾವ ಮನುಷ್ಯನಿಗೆ ಅಸಾಧ್ಯ ಅನ್ನುವ ಶಬ್ದ ಕಂಡಿರಲಿಲ್ಲ ಆ ಮನುಷ್ಯನಿಗೆ ಸ್ವಾತಂತ್ರ್ಯ ಕೂಡ ಇರಲಿಲ್ಲ! ಸಂಚರಿಸಲು ಉಣಲು, ಉಡಲು! ಮಾತನಾಡಲು, ನೋಡಲು! ನೆಪೋಲಿಯನ್‌ನ ಸ್ಥಿತಿಯೇ ಹೀಗಾದ ಬಳಿಕ ಸಾಮಾನ್ಯನ ಮಾತೇನು?

ನಮ್ಮ ಹರೆಯದಲ್ಲಿ ಜಗತ್ತನ್ನೇ ಬದಲಾಯಿಸುವ ಕ್ರಾಂತಿಯ ಕನಸು! ದೇಹದಲ್ಲಿ ಕಾವು; ಮನದಲ್ಲಿ ಅಮಿತ ಉತ್ಸಾಹ. ಹುಟ್ಟಿನ ದಂಡೆ ಕಂಡರೂ ಮರಣದ ಆ ದಂಡೆ ಆಗ ಕಾಣದು. ಮಧ್ಯಮ ವಯಸ್ಸಿನ ನಂತರ ಆಚೆಯ ಅಂತ್ಯಗೊಳ್ಳ ದಡ ಕಾಣತೊಡಗುತ್ತದೆ. ಮರಣದ ಗಾಳಿ ಸುಳಿಯುತ್ತದೆ. ಆಗ ಕನಸುಗಳು ನಿಶ್ಶಕ್ತವಾಗುತ್ತವೆ. ಅಷ್ಟಿಷ್ಟು ಕಂಡು ಮರೆಯಾಗಿ ಹೋಗುತ್ತವೆ.

ಎಲ್ಲವೂ ಪ್ರಾರಂಭವಾಗುತ್ತದೆ, ಅಂತ್ಯಗೊಳ್ಳುತ್ತದೆ. ಯಾವಾಗ ಕೊನೆ ಕಾಣಲಿಕ್ಕೆ ಪ್ರಾರಂಭವಾಯಿತೋ ಮೊದಲಿನ ಸಂತಸ, ಉತ್ಸಾಹ ಕಡಿಮೆ ಆಗುತ್ತದೆ. ಕೊನೆಗೆ ಮನುಷ್ಯನ ಮನಸ್ಸು ಜಗತ್ತಿನಿಂದ ನಿವೃತ್ತಿ ಹೊಂದುವ ಅವಸ್ಥೆಗೆ ಮುಟ್ಟುತ್ತದೆ. ಇದು ದೇಹಕ್ಕೆ ಅನ್ವಯಿಸುತ್ತದೆ. ಸುತ್ತಲಿನ ಪ್ರತಿ ವಸ್ತುವಿಗೂ ಈ ನಿಯತಿ ಅನ್ವಯಿಸುತ್ತದೆ. ವಿಶ್ವಕ್ಕೆಯೇ ಆದಿ ಇದೆ, ಅಂತ್ಯ ಇದೆ. ಮಧ್ಯದಲ್ಲಿ ಅದು ತೋರುತ್ತದೆ. ಇದು ವಿಶ್ವಜೀವನದ ಚಿತ್ರ, ಈ ಜೀವನ ಚಿತ್ರದೊಳಗೆ ಯಾವ ತತ್ತ್ವ ಸಿಲುಕಿಲ್ಲವೋ ಅಂಥ ವಸ್ತುವೇ ದೇವರು. ಅಂದರೆ ಯಾವುದು ಕಾಲದಲ್ಲಿ ರೂಪುಗೊಂಡಿಲ್ಲ. ಯಾವುದಕ್ಕೆ ಬಾಲ್ಯ ಯೌವನ ವೃದ್ಧಾಪ್ಯಗಳಿಲ್ಲ, ಯಾವುದನ್ನು ಯಾವ ರೀತಿಯಿಂದಲೂ ವಿನಾಶಗೊಳಿಸಲಾಗದೋ ಅದುವೇ ದೇವತತ್ತ್ವ, ಭಗವಂತನ ವಿಷಯದಲ್ಲಿ ಎಂದು ಹುಟ್ಟಿದ? ಲಗ್ನವಾದನೆಂದು? ಎಂದು ಅವನ ಸಾವು? ಎಂಬ ಪ್ರಶ್ನೆಗಳಿಗೆ ಅರ್ಥವೇ ಇಲ್ಲ.

ನನ್ನ ದೇಹಕ್ಕೆ ಆದಿ ಅಂತ್ಯ. ಮನಸ್ಸಿಗೂ ಕೂಡ. ಆದರೆ ಇದೇ ದೇಹ-ಮನಗಳಲ್ಲಿರುವ 'ನಾನು' ಎಂಬ ಪ್ರತಿಜ್ಞಾತತ್ತ್ವವಿದೆಯಲ್ಲ ಅದು ಮಾತ್ರ ಆದಿ, ಅಂತ್ಯವಿರಹಿತ, ಅದಕ್ಕೆ ಆಯುಷ್ಯವಿಲ್ಲ, ಕಾಲದ ಪರಿಣಾಮವಿಲ್ಲ. ಅದು 'ದೇವಾಂಶ' ದೇಹದಲ್ಲಿ ಅದು ಇರುವಂತೆ ಪರಿಣಾಮಗೊಳ್ಳುತ್ತಿರುವ ಸಮಸ್ತ ಜಗತ್ತಿನಲ್ಲಿಯೂ ಅದು ಸ್ಥಿರವಾಗಿ ನೆಲೆಸಿದೆ.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಅದೇ 'ಈಶ'ದೇವ! ಅದು ಅನಾದಿ ಅನಂತ. ಅದು ನೆಲೆಸಿದ ಜಗತ್ತು ದೇಹಗಳು ಮಾತ್ರ ಕಲಿಲ! ಮಿಶ್ರಣ! ಕಾಲನಿಬಂಧಿತ ಸಮ್ಮೂಹ! ಇಲ್ಲಿ ವಿವಿಧ ವಸ್ತುಗಳು; ವ್ಯಕ್ತಿಗಳು; ಜೀವಜಂತುಗಳು! ರಾಮ ರಾವಣರು; ಪಾಪಿ ಪುಣ್ಯವಂತರು, ಸತ್ಯಸಂಧರು, ಅಪ್ರಾಮಾಣಿಕ ವಂಚಕರು ಬುದ್ಧನಂತವರು ಅಂಗುಲಿಮಾಲನಂತವರು, ಮಾರಕರು ತಾರಕರು! ಎಲ್ಲರೂ ಇಲ್ಲಿದ್ದಾರೆ. ಇದು ಕಲಿಲ!

'ಕಲಿಲ' ಮೈಸೂರಿನ ಸಂದಿ ಸಂಧಿಗಳಲ್ಲಿ ಹರಿದು ಸಂಧಿಸಿದ ಸರಸ್ಸಿನಂತೆ! ಆ ನೀರಿನಲ್ಲಿ ಏನಿಲ್ಲ? ಸಾವಿರ ಸಾವಿರ ಮನೆಗಳ ಮಾಲಿನ್ಯ! ಎಲ್ಲ ಧರ್ಮೀಯರು ಎಲ್ಲ ಮತೀಯರು ಬಳಸಿದ ನೀರದು! ಕಲಕಿದೆ; ಮಂದರಾಡಿ! ನೂರು ಸಾಸಿರ ವಾಸನೆಗಳ ಮಿಶ್ರಣ! ಹಲವು ರುಚಿಗಳ ಮಿಲನ! ಹಲವು ನೋಟಗಳ ಭಾವಗಳ ವಿಚಾರಗಳ ಜಾತ್ರೆ! ಜಗತ್ತು ಸರ್ವಸಂಕಲನವಾದುದರಿಂದ ಅದರದೇ ವೈಭವವದಕ್ಕೆ. ಅದರದೇ ಸೌಂದರ್ಯ. ಅದರದೇ ಕುರೂಪ! ಎಲ್ಲವೂ. 'ಕಲಿಲ' ಮಾರ್ಮಿಕ ಶಬ್ದ! ಯೋಗ್ಯ ಪದಬಳಕೆ ನಮ್ಮ ಸಾಮಾನ್ಯ ಗ್ರಾಮೀಣ ಭಾಷೆಯಲ್ಲಿ ಅದು 'ಹೊಲಸು ರಾಡಿ!'.

ಹೀಗಿದೆ ಜಗತ್ತೆಂದು ಗೊತ್ತಾದರೆ ಮನುಷ್ಯ ಜಾಣನಾಗುತ್ತಾನೆ. ಏನಿದ್ದರೂ, ಏನಾದರೂ ಬಹಳ ತಲೆ ಕೆಡಿಸಿಕೊಳ್ಳುವುದಿಲ್ಲ. ಜಗತ್ತಿನ ಅತಿವಿಮರ್ಶೆಗೆ ಹೋಗ; ರಾಡಿಯಲ್ಲಿ ಕಾಲಾಡಿಸಿದರೆ ಕೈಯಾಡಿಸಿದರೆ ಬಂದುದೇನು? ಕೈ ಹೊಲಸು! ಕಾಲು ಹೊಲಸು! ಮೈ ಹೊಲಸು; ಮನ ಹೊಲಸು; ಎಂದೇ 'ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ' ಎಂದ, ಬಸವಣ್ಣ.

ಜಗತ್ತಿನಿಂದ ನಿರ್ಲಿಪ್ತರಾಗಿ ಉಳಿಯುವುದಕ್ಕೆ ಇದೊಂದು ಮಾತು ಸಾಕು. ಇದರಲ್ಲಿ ಏನು ಸ್ವಚ್ಛ ಮಾಡುವುದು? ಎಷ್ಟು ಮಾಡಬಹುದು ಅಂದರೆ, ಒಂದು ತಂಬಿಗೆ ತುಂಬಿಕೊಳ್ಳುವುದು ಅದನ್ನು ಕಾಯಿಸುವುದು. ಫಿಲ್ಟರ್ ಮಾಡುವುದು, ಕುಡಿಯುವುದು! ಅದು ಸುಲಭ ಮತ್ತು ಅಪೇಕ್ಷಿತ. ಮೈಸೂರಿನಲ್ಲಿ ಎಲ್ಲೆಲ್ಲಿ ಏನೇನು ಇದೆ, ನಡೆದಿದೆ ಹುಡುಕಾಡಲು ಹೋಗಬಾರದು. ನಮಗೆ ಎಷ್ಟು ಬೇಕೋ ಅಷ್ಟು ತರುವುದು. ಸ್ವಚ್ಛ ಮಾಡಿಕೊಂಡು ಉಣ್ಣುವುದು; ಅನುಭವಿಸುವುದು.ಇದು ಲಲಿತ ಜೀವನ; ಯಾರ ಯಾರ ವಿಚಾರ ಏನೇನು ಇದೆ ಎಂದು ತಲೆಗೆ ಹಾಕಿಕೊಂಡರೆ ನಮ್ಮ ತಲೆಯೂ ಕಲಿಲ ಆಗುತ್ತದೆ! ಅದರ ಅರ್ಥ ಯಾರ ವಿಚಾರವನ್ನೂ ಕೇಳಬಾರದೆಂದಲ್ಲ. ನಮಗೆ ಎಷ್ಟು ಬೇಕೋ ಅಷ್ಟು ವಿಚಾರ ಸ್ವೀಕರಿಸಿ ಉಳಿದದ್ದನ್ನು ಮರೆತುಬಿಡುವುದು!

ಪಶ್ಚಿಮದೇಶಕ್ಕೆ ನಾವು ಹೋಗುತ್ತೇವೆ. ಅವರಿಗೆ ಮಾಂಸಾಹಾರ ಸಾಮಾನ್ಯ. ರಮ್ಮು, ಬೀರು, ವೈನುಗಳು ಅನಿವಾರ್ಯ. ಅವುಗಳೊಂದಿಗೆ ಕುಳಿತ ಅವರೆದುರೇ ನಾವು ಕುಳಿತುಕೊಳ್ಳಬೇಕಾದ ಪ್ರಸಂಗ. ನಾವು ಸಸ್ಯಾಹಾರಿಗಳು. ಏನು ಮಾಡುವುದು? ಆಗೇನು ಮಾಡುವುದು? ಅವರನ್ನು ಜರಿಯುವುದೆ? ಪರಿವರ್ತಿಸುವುದೆ? ಸಾಧ್ಯವಿಲ್ಲ. ಅಷ್ಟು ಸುಲಭವಲ್ಲ ಕೂಡ. ನಮಗಿರುವ ಹೃದ್ಯ ಮಾರ್ಗವೆಂದರೆ ಅವರನ್ನು ಕಂಡೂ ಕಾಣದಂತೆ ಕುಳಿತು ನಮ್ಮ ನೆಚ್ಚಿನ ಆಹಾರ–ನೀರು ನಾವು ಅನುಭವಿಸುವುದು! ನಮ್ಮದೇ ಪದ್ಧತಿ ಅಭಿರುಚಿ ಶ್ರೇಷ್ಠ ಅವರದು ಕೀಳು ಎಂದು ವಾದಕ್ಕಿಳಿಯುವಲ್ಲಿ ಏನು ಜಾಣತನ? ನಾವು ಯುರೋಪಿನ ನಿವಾಸಿಗಳಲ್ಲ; ಯಾತ್ರಿಕರು ಅಷ್ಟೇ. ದೇಶ ನೋಡಿ ತಿರುಗಿ ಬಂದು ಆ ದೇಶದ ಕಲಾವೈಭವ, ಬಾಳವೈಭವ, ವಿಜ್ಞಾನಸಾಧನೆ ಕೊಂಡಾಡಬಹುದು ಅಷ್ಟೇ.

**ಕಲಿಲಸ್ಯ ಮಧ್ಯೇ ಅನಾದ್ಯನಂತಂ**
**ವಿಶ್ವಸ್ಯ ಸೃಷ್ಟಾರಮನಂತ ರೂಪಮ್**

ಕಲಿಲ ಸ್ಥಿರವಲ್ಲ. ಶಾಶ್ವತವಲ್ಲ. ಆದ್ಯಂತಗಳಿವೆ ಅದಕ್ಕೆ. ಅದರಲ್ಲಿಯೇ ಆದಿ ಅಂತಗಳಿಲ್ಲದ ಒಂದು ದಿವ್ಯ ಅನಂತ ವಸ್ತುವಿದೆ. ಅದು ಸತ್ಯ ಅದು ಅಚಿಂತ್ಯರೂಪ. ಅದು 'ಭಗವಂತ'. ವಿಶ್ವದ ಸೃಷ್ಟಾರ.

ಸೂರ್ಯನ ಬೆಳಕಿನಲ್ಲಿ ಆಕಾಶಕ್ಕೆ ಮೇಘಗಳು ಏರುತ್ತವೆ; ಸ್ವೇಚ್ಛೆಯಾಗಿ ಮಳೆ ಸುರಿಸುತ್ತವೆ. ಎಲ್ಲ ಕಡೆ ಹೊಳೆ ಹರಿಯುತ್ತವೆ. ಎಲ್ಲ ಕಾರ್ಯಗಳು ಸಾಗುತ್ತವೆ. ಸೃಷ್ಟಿ ಇದು. ಇದು ಆಕಾಶದ, ಸೂರ್ಯನ ಹಾಗೂ ಜಲದ ಸೃಷ್ಟಿ! ಸೂರ್ಯ ನೇರವಾಗಿ ಭಾಗವಹಿಸದಿದ್ದರೂ ಆಕಾಶದ ಸನ್ನಿಧಾನಗೊಳಗೆ ಈ ಕಾರ್ಯ ಸಾಗುವುದರಿಂದ ಅಕಾಶ ಸೃಷ್ಟಾರ. ಆಕಾಶ ನೇರವಾಗಿ ಭಾಗವಹಿಸದಿದ್ದರೂ





ಆಕಾಶದ ಸನ್ನಿಧಾನದೊಳಗೆ ಈ ಕಾರ್ಯ ಸಾಗುವುದರಿಂದ ಆಕಾಶ ಸೃಷ್ಟಾರ. ಹಾಗೆ ಭಗವಂತ. ಅವನ ಸಹಜ ಸನ್ನಿಧಾನದಲ್ಲಿ ಜಗತ್ತು ನಿರ್ಮಾಣ ಆಗುತ್ತದೆ. ಅಂದರೆ ಅವನು ಈ ಜಗತ್ತಿಗೇ ಕಾರಣ! ಸನ್ನಿಧಾನ ಕಾರಣ!

ದೈಹಿಕ ಐಂದ್ರಿಯಿಕ ಶ್ರಮದಿಂದ ನಿರ್ಮಿಸುವ ಕರ್ಮ ಕಾರಣಕ್ಕಿಂತಲೂ, ಇಚ್ಛಾಶಕ್ತಿಯಿಂದ ನಿರ್ಮಿಸುವ ಸಂಕಲ್ಪ ಕಾರಣಕ್ಕಿಂತಲೂ ಈ ಸನ್ನಿಧಾನ ಕಾರಣ ಬೇರೆ.

ಕ್ಷ ಇದೆ; ಆದ್ದರಿಂದ ಕ್ಷ, ಬ, ಕ ಕಾರ್ಯಗಳು ಜರುಗುತ್ತಿದ್ದರೆ ಕ್ಷವು ಅವುಗಳ ಸನ್ನಿಧಾನ ಕಾರಣ. ಪರಮಾತ್ಮ ಇದ್ದಾನೆ. ಆದ್ದರಿಂದ ಅವನ ಸನ್ನಿಧಿಯಲ್ಲಿ ಜಗತ್ತು ರೂಪುಗೊಂಡಿದೆ. ಈ ಅರ್ಥದಲ್ಲಿ ದೇವನು ವಿಶ್ವ ಸೃಷ್ಟಾರ. ಅವನು ಅನಂತ. ನೋಡುವ ಸಾಮರ್ಥ್ಯ ಹಾಗೂ ಸಾಧನ ಇದ್ದರೆ ಯಾವುದೇ ರೂಪದಲ್ಲಿ ಭಗವಂತನನ್ನು ಕಾಣಬಹುದು. ಇಂತಹ ವಸ್ತುವಿನೊಳಗೆ ಭಗವಂತನನ್ನು ಕಾಣಲಿಕ್ಕೆ ಆಗುತ್ತದೆ, ಇಂತಹ ವಸ್ತುವಿನೊಳಗೆ ಭಗವಂತನನ್ನು ಕಾಣಲಿಕ್ಕೆ ಆಗುವುದಿಲ್ಲ ಎಂದಿಲ್ಲ. ಸಂತರನೇಕರು ಕಲ್ಲಿನೊಳಗೆ, ಮಣ್ಣಿನೊಳಗೆ, ಕಟ್ಟಿಗೆಯೊಳಗೆ, ಗುಡ್ಡ, ನೀರು ಆಕಾಶದೊಳಗೆಲ್ಲಾ ಕಂಡರು. ಎಲ್ಲಾ ವಸ್ತುಗಳಲ್ಲಿ ಕಂಡರು.

ಗೊಲ್ಲಾಳೇಶ್ವರ ಬಾಲಕ. ಶ್ರೀಶೈಲಕ್ಕೆ ಹೋಗುವವರ ಕೈಯ್ಯಲ್ಲಿ ನಾಲ್ಕು ದುಡ್ಡನಿತ್ತು ತನಗಾಗಿ ಒಂದು ಲಿಂಗದೇವನ ತರಲು ವಿನಂತಿಸಿದ. ಅವರು ತಿರುಗಿ ಬರುವಾಗ ಅಲ್ಲಿಯೇ ಬಿದ್ದಿದ್ದ ಹಿಕ್ಕೆಯೊಂದನ್ನು ಎತ್ತಿ 'ಇದು ಪವಿತ್ರ ಲಿಂಗ' ಎಂದು ಅವನಿಗೆ ಇತ್ತರು. ಅವನಿಗೆ ಗೊತ್ತಿಲ್ಲವೆಂದು ಅದು ಹಿಕ್ಕೆ ಎಂದು? ಕುರಿಮಂದೆಯೊಳಗೆ ಹುಟ್ಟಿದವ, ಅಲ್ಲೇ ಬೆಳೆದವ. ಕೈಯಲ್ಲಿ ಹಿಕ್ಕೆ ನಿಜ. ಆದರೆ ಅತ್ತ ನೋಡುವ ಭಾವ ಬದಲಾಗಿತ್ತು. ಸಾಕ್ಷಾತ್ ಭಗವಂತನೇ ಎಂದು ತಿಳಿದ. ವಸ್ತುಗಳಲ್ಲಿ ಭಗವಂತನನ್ನು ಕಾಣುವ ಶಕ್ತಿ ಅಂತರಂಗಕ್ಕಿದೆ. ಆ ಶಕ್ತಿಯಿದ್ದವರು ಹೆಂಡತಿಯಲ್ಲಿ, ಗಂಡನಲ್ಲಿ, ಮಕ್ಕಳಲ್ಲಿ ಕಂಡಿದ್ದಾರೆ; ತುಚ್ಛ ತುಚ್ಛವೆನಿಸುವ ವಸ್ತುಗಳಲ್ಲಿ ದೇವನ ಗುರುತಿಸಿದ್ದಾರೆ. ಭಗವಂತನನ್ನು ಇಲ್ಲಿ ಇದ್ದಾನೆ, ಇಲ್ಲಿ ಇಲ್ಲ, ಇದು ಭಗವಂತನ ರೂಪ. ಇದು ಭಗವತ್ ರೂಪ ಅಲ್ಲ, ಎಂದು ಭಾವಿಸಬಾರದು ಮನುಷ್ಯ. ಎಲ್ಲ ಅಷ್ಟೇ. ಕಾಣುವ ಕಣ್ಣಿಗೆ ಎಲ್ಲವೂ ಅಷ್ಟೇ.

'ವಿಶ್ವಸ್ಯ ಏಕಂ ಪರಿವೇಷ್ಟಿತಾರಂ' ಏಕೈಕವಾದ ದೇವನು ಈ ಸಮಸ್ತ ಜಗತ್ತನ್ನು ಆಚ್ಛಾದಿಸಿದ್ದಾನೆ. ಅವನಿಲ್ಲದ, ಅವನ ಸ್ಪರ್ಶವಿಲ್ಲದ ತಾಣವಿಲ್ಲ. ಜಗತ್ತು ಮಿಥ್ಯೆ, ಮಾಯೆ ಇರಬಹುದು. ಅಸತ್ಯ ಇರಬಹುದು. ಆದರೆ ಅದನ್ನೆಲ್ಲ ಅಧಿಷ್ಠಿಸಿಸಿದ್ದಾನೆ ದೇವ! ಸತ್ಯ ಸತ್ಯ; ನಿತ್ಯ! ಅಸತ್ಯವೇನಾದರೂ ಇದ್ದರೆ, ದೇವನು ಅದಕ್ಕೆ ಆಧಾರವಿತ್ತಿದ್ದಾನೆ.

ನಿಸರ್ಗದಲ್ಲಿ ಸತ್ಯ, ಅಸತ್ಯ ನುಡಿವ ಅಪ್ರಾಮಾಣಿಕನಲ್ಲಿ ಸತ್ಯ, ಸತ್ಯವು ನೆಲ, ಅಸತ್ಯವು ನೆರಳು; ನೆಲವೇ ಇರದಿರೆ ನೆರಳೆಲ್ಲಿ? ಅಸತ್ಯಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ. ನಾಲ್ಕು ದಿನ ಅದು ಬಾಳಿದರೆ ಅದು ಸತ್ಯದ ಆಶ್ರಯದಲ್ಲಿಯೇ.

ಜ್ಞಾತ್ವಾ ದೇವಂಮುಚ್ಯತೇ ಸರ್ವಪಾಶೈಃ. ಸತ್ಯವು (ದೇವನು) ಸರ್ವಾಧಾರ, ಸರ್ವರೂಪ, ವ್ಯಾಪಕ, ಎನ್ನುವುದು ತಿಳಿದು ಬಂದರೆ ಆತ ಸರ್ವಪಾಪಮುಕ್ತನಾಗುತ್ತಾನೆ. ಸರ್ವಪಾಶಗಳಿಂದ ಮುಕ್ತನಾಗುತ್ತಾನೆ. ಮನುಷ್ಯನನ್ನು ಬಂಧಿಸಿದ ಪಾಶಗಳು ಅತಿ ಸೂಕ್ಷ್ಮ. ಅವು ಆಸೆಗಳು!

*ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ*
*ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥ ಸಂಚಯಾನ್*

ಮನುಷ್ಯ ಅನೇಕ ಆಶಾಪಾಶಗಳಿಂದ ಬಂಧಿತನಾಗಿದ್ದಾನೆ. ಸಣ್ಣ ಪುಟ್ಟ ಆಸೆಗಳೂ ಸರಿ, ಹಿರಿದಾದ ಆಸೆಗಳೂ ಸರಿ, ಎರಡೂ ಬಂಧನ ಕಾರಣ. ವಸ್ತುಗಳ ವ್ಯಕ್ತಿಗಳ ಸಮೀಪವಿರುವಾಗ ಬಂಧನ ಗೊತ್ತಾಗದು. ಅದರಿಂದ ದೂರ ಸರಿದಾಗ ಬಂಧನವಿದೆ, ಎನ್ನುವುದು ತಿಳಿದು ಬರುತ್ತದೆ. ಉದಾ: ಸಿಗರೇಟ್ ಸೇದುವಿಕೆ. ನಮಗೇನೂ ಅದು ಚಟವಾಗಿಲ್ಲ ಎಂದೇ ಪ್ರತಿಪಾದಿಸುತ್ತೇನೆ. ಆದರೆ ಬಿಟ್ಟು ದೂರ ಸರಿದಾಗ ಅದರ ವಿಪರೀತ ಎಳೆತ–ಸೆಳೆತ ಅನುಭವಕ್ಕೆ ಬರುತ್ತದೆ.

ಆಮಂತ್ರಣ ಕೊಡಲು ಬಂದ ವಿದುರ. ಪಗಡೆ ಆಡುವ ಆಮಂತ್ರಣ. ಧರ್ಮರಾಜನಿಗೆ ಜೂಜು ಎಂದರೆ ಅಂದರೆ ಅಷ್ಟು ಇಷ್ಟ! ಶಬ್ದ ಕೇಳಿಬಿಟ್ಟರೆ ಅವನ ಕೈ ತವಕಿಸುತ್ತಿತ್ತು. ವಿದುರ 'ಮಹಾರಾಜ, ತಾವು ಧರ್ಮಾನುರಾಗಿಗಳು, ಹಿತಾಹಿತಗಳ ಪರೀಕ್ಷಿಸಿ, ಪರಾಮರ್ಶಿಸಿ ಈ

ಜೂಜಿನ ಆಮಂತ್ರಣ ಸ್ವೀಕರಿಸಿರಿ ಎಂದ. ಆದರೇನು? ಧರ್ಮನ ಮನಸ್ಸು ಸಾರಾಸಾರ ವಿವೇಚಿಸುವಷ್ಟು, ಭವಿಷ್ಯದತ್ತ ದೃಷ್ಟಿ ಹರಿಸುವಷ್ಟು ಮುಕ್ತವಾಗಿರಲಿಲ್ಲ. ಜೂಜಿನ ವ್ಯಸನ ಅವನನ್ನು ಅವನಿಗರಿಯದಂತೆ ಬಂಧಿಸಿತ್ತು. ಬಹು ಸೂಕ್ಷ್ಮವಾಗಿ ಬಂಧಿಸಿತ್ತು ಎನ್ನಿ. 'ಜೂಜು, ನಮಗೆ ಸಲ್ಲದು; ಅದು ಧರ್ಮಚರ್ಯೆ ಏನಲ್ಲ' ಎಂದು ಹೇಳಲು ಆಗಲಿಲ್ಲ! ಅದರ ಪರಿಣಾಮ ಮಹಾಭಾರತ!

ನಾವು ಮಾನಸಿಕವಾಗಿ ಅಶಕ್ತರು, ವ್ಯಸನಾಧೀನರು. ಎರಡು ಇಂಚಿನ ಸಿಗರೇಟು ಸಾಯುವವರೆಗೆ ಬಂಧಿಸುವುದೆಂದಾಗ ಅರವತ್ತು ಎಪ್ಪತ್ತು ಇಂಚಿನ ವ್ಯಕ್ತಿಗಳು. ಹೊಲ ಮನೆ ಧನಗಳು ನಮ್ಮನ್ನು ಅದೆಷ್ಟು ಗಾಢವಾಗಿ ಬಂಧಿಸಿರಬೇಡ?

ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ-ಯಾವಾಗ ಭಗವಂತನ ಚಿಂತನೆ ಉಂಟಾಗುತ್ತದೆ. ಆಗ ಆಶಾ ಪಾಶಗಳೆಲ್ಲಾ ಹರಿದು ಹೋಗುತ್ತವೆ. ಮನುಷ್ಯ ವಿಮುಕ್ತನಾಗಿಬಿಡುತ್ತಾನೆ. ಇದು ವಿಮುಕ್ತಾವಸ್ಥೆ. ಆಸೆಗಳನ್ನು ಹರಿದು ಹಾಕುವ ಶಕ್ತಿ ಭಗವತ್‌ಚಿಂತನೆಯೊಳಗಿದೆ. ಕಲಿಲವೆನಿಸುವ ಜಗತ್ತಿನಲ್ಲಿ ಸತ್ಯ ಶಾಶ್ವತ ವಸ್ತು; ಕಾಲದ ಪರಿಮಿತಿ ಇಲ್ಲದಂಥ ವಸ್ತು ಇದೆ. ಆ ವಸ್ತುವಿನ ನೆನಹಿನೊಂದಿಗೆ ಬಾಳಿದರೆ ಕಲಿಲದ ಬಂಧನ ಉಂಟಾಗದು. ಬಂಧನವಿದ್ದರೂ ಅದು ಹರಿದು ಹೋಗುವುದು. ಅದು ಮುಕ್ತ ಸ್ಥಿತಿ. ಆಗ ಜಗತ್ತು ನಮಗೆಲ್ಲಾ ಬಹಳ ಅಪ್ಯಾಯಮಾನವಾಗಿ ಕಾಣುತ್ತದೆ. ಬದುಕು ಸಹಜವೂ ಹರ್ಷಪೂರ್ಣವೂ ಆಗುತ್ತದೆ.

ನೀವು ಮುಪ್ಪಿನವರು. ನಿಮ್ಮ ಮಕ್ಕಳು, ನಿಮ್ಮ ಮಾತು ಕೇಳಲಿಲ್ಲ ಎನ್ನಿ. ಮನಸ್ಸಿಗೇಕೆ ವ್ಯಥೆ? ಯುವಕರು ವೃದ್ಧರ ಮಾತು ಕೇಳುವುದು ಕಡಿಮೆ. ನೀವು ಯುವಕರಾಗಿದ್ದಾಗ ಯಾರ ಮಾತನ್ನು ಕೇಳಿದಿರೋ ಅಂಥವರ ಮಾತನ್ನೇ ನಿಮ್ಮ ಮಕ್ಕಳು ಕೇಳುತ್ತಾರೆ ಈಗ! ಇದು ಜಗದ ನೀತಿ ರೀತಿ! ಎಂದು ತಿಳಿದು ಬಾಳಬೇಕು. ಕೇಳಿದರೆ ಕೇಳುತ್ತಾರೆ; ಇಲ್ಲವಾದರೆ ಬಿಡುತ್ತಾರೆ. ಹೇಗಿದ್ದರೂ ಸಮಾಧಾನವಾಗಿರಬೇಕು. ಚಿಂತೆ ಏಕೆ? ಯಾವ ಪ್ರಯೋಜನಕ್ಕಾಗಿ? ವಿಶ್ವದ ರೂಪರಂಗಗಳು ಗೊತ್ತಿಲ್ಲದಿದ್ದರೆ ಚಿಂತೆಯ ಮೂಟೆ ಹೊತ್ತು ಬದುಕಿನ ದಾರಿ ನಡೆಯುತ್ತೇವೆ. ಭಾರ, ತಾಪ ಅನುಭವಿಸುತ್ತೇವೆ. ಅರಿತರೆ ಮೂಟೆ ಬರಿದು! ಚಿಂತೆ ಮಾಯ! ಬಾಳ ಪಯಣ ಸುಖಕರ! ಹಗುರ. ಈ ವಿಮಲ ಜೀವನ ನಡೆಸಲೆಂದೇ ಭಗವಚ್ಚಿಂತನ! ✪

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಓದುಗರಾಗಿರುವುದು ಸಂತೋಷ. ಇದರಿಂದ **'ಸಿದ್ಧಗಂಗಾ'** ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಪತ್ರಿಕೆ ಮುನ್ನಡೆ ಅಸಾಧ್ಯವಾಗಿದೆ. ಪೇಪರ್, ಪ್ರಿಂಟಿಂಗ್, ಪೋಸ್ಟೇಜ್ ಇನ್ನಿತರೆ ಖರ್ಚು ವೆಚ್ಚಗಳು ದುಬಾರಿಯಾಗಿದೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಪ್ರಸಾರ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಹಿಂಜರಿತ ದಯವಿಟ್ಟು ಅರ್ಥಮಾಡಿಕೊಳ್ಳಿ.

**ಪ್ರಸ್ತುತ ಆಜೀವ ಚಂದಾ ೨೦೧೪ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಬೇಕು.**

ನಿಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತ **ಸಿದ್ಧಗಂಗಾ ಮಾಸಪತ್ರಿಕೆ** ಹೆಸರಿನಲ್ಲಿ **ನಗದು/ಚೆಕ್/ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ LM ನಂಬರ್ ಸೂಚಿಸಿ ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರುತ್ತೇವೆ.

**'ಸಿದ್ಧಗಂಗಾ'** ಮುನ್ನಡೆಗೆ ಬಾಕಿ ಸಂದಾಯ ಮಾಡಿ ಸಹಕರಿಸಬೇಕಾಗಿ ನಮ್ರ ವಿನಂತಿ.

**ಪ್ರಕಾಶಕರು, 'ಸಿದ್ಧಗಂಗಾ'** ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322







# ಶಿವಲಿಂಗ ದರ್ಶನ

*

–ಬ್ರಹ್ಮಕುಮಾರ ಬಸವರಾಜ ರಾಜಋಷಿ

**ಪರಮಾತ್ಮ ಶಿವನ ಮೂರ್ತಿ ರಚನೆ :**

ಗಾಂಧೀಜಿ, ನೆಹರೂಜಿ, ಶಾಸ್ತ್ರೀಜಿ, ನೇತಾಜಿ ಮುಂತಾದವರ ನೆನಪು ತಮಗೆ ಉಳಿಯಲು ಹಾಗೂ ಮುಂಬರುವ ಪೀಳಿಗೆಗಳಿಗೆ ಮಾಡಿ ಮಡಿದವರ ಪರಿಚಯ ಮಾಡಿ ಕೊಡಲು ಆಯಾ ವ್ಯಕ್ತಿಗಳ ಚಿತ್ರಗಳನ್ನು, ಪ್ರತಿಮೆಗಳನ್ನು ಹೇಗೆ ಜತನೆ ಮಾಡಿಕೊಂಡು ಬಂದಿದ್ದಾರೆಯೋ, ಹಾಗೆಯೇ ಅವ್ಯಕ್ತ ಪರಂಜ್ಯೋತಿ ಶಿವ ಪರಮಾತ್ಮನ ಸತ್ಯ ಪರಿಚಯ ತಿಳಿದಿದ್ದ ನಮ್ಮ ಆದ್ಯರು, ಆರ್ಯರು, ಪೂರ್ವಜರು, ಪುರಾತನರು, ಋಷಿಗಳು, ಮುನಿಗಳು, ಮುಂಬರುವ ತಮ್ಮ ಜನತೆಗೆ ಅರ್ಥಾತ್ ಪೀಳಿಗೆಗೆ ಪರಮಾತ್ಮ ಶಿವನ ಪರಿಚಯ ಮಾಡಿಕೊಡುವುದಕ್ಕೋಸ್ಕರ ನಿರಾಕಾರ ಶಿವ ಪರಮಾತ್ಮನ ಮೂರ್ತಿಗಳನ್ನು ಲಿಂಗದ ರೂಪದಲ್ಲಿ ರಚಿಸಿ, ಪೀಠರಹಿತ ಹಾಗೂ ಪೀಠಗಳ ಮೇಲೆ ಅದನ್ನು ಸ್ಥಾಪಿಸಿದರು. ಹೇಗೆಂದರೆ ರೇಖಾಶಾಸ್ತ್ರಜ್ಞನು ಉದ್ದ-ಅಗಲ, ಎತ್ತರ-ಸುತ್ತಳತೆ, ಗಾತ್ರವಿಲ್ಲದ ಬಿಂದುವನ್ನು ಬಿಳಿ ಕಾಗದದ ಮೇಲೆ ಹೇಗೆ ಮೂಡಿಸುತ್ತಾನೋ ಹಾಗೆ ನಮ್ಮ ಪೂರ್ವಜರು ಜನಸಾಮಾನ್ಯರಿಗೆ ಅವ್ಯಕ್ತ ನಿರಾಕಾರ ಪರಮಾತ್ಮನ ಪರಿಚಯವನ್ನು ಸ್ಥೂಲದಲ್ಲಿ ಮಾಡಿಕೊಡಲು ಮತ್ತು ಮುಂಬರುವ ಜನತೆಗೆ ಅವ್ಯಕ್ತ ಪರಮಾತ್ಮನ ಪರಿಚಯವನ್ನು ಮರೆಯದಂತೆ ವ್ಯಕ್ತದಲ್ಲಿ ಕಾದಿರಿಸಿಸಲು ಅವ್ಯಕ್ತ ಜ್ಯೋತಿರ್ಬಿಂದು ಶಿವಪರಮಾತ್ಮನ ಸ್ವರೂಪವನ್ನು ವ್ಯಕ್ತದಲ್ಲಿ ಶಿಲೆಯಲ್ಲಿ ಜ್ಯೋತಿಸ್ವರೂಪದ ಆಕಾರದಲ್ಲಿ ಮೂರ್ತಿಯನ್ನು ರಚಿಸಿ ಆ ಮೂರ್ತಿಗೆ ಜ್ಯೋತಿರ್ಬಿಂದು ಶಿವನ ಬದಲಾಗಿ ಜ್ಯೋತಿರ್ಲಿಂಗ ಶಿವನೆಂದು ಮಹಿಮೆ ಮಾಡಿದರು. ಶಿವಲಿಂಗಗಳನ್ನು ಶಿಲೆಯಲ್ಲಿ ಕೆತ್ತಿ ಪೀಠದಲ್ಲಿ ಮೇಲಿರಿಸಿದರು.



ಶಿವಲಿಂಗವೆಂದರೆ ಶಿವನಮೂರ್ತಿ ಎಂದರ್ಥ. ಶಿಲೆಯಲ್ಲಿ ಕೆತ್ತಿದ ಶಿವನ ಮೂರ್ತಿಯನ್ನು ಮಾನವರು ಗೌರವಿಸಲಿ. ಸ್ಥೂಲದ ಮೂಲಕ ಸೂಕ್ಷ್ಮವನ್ನು ಅರಿಯಲಿ. ವ್ಯಕ್ತದ ಮೂಲಕ ಅವ್ಯಕ್ತನನ್ನು ಅರ್ಥ ಮಾಡಿಕೊಳ್ಳಲೆಂದು ಶಿವಲಿಂಗಕ್ಕೆ ಪೂಜೆ, ಭಕ್ತಿಗಳನ್ನು ಮಾಡಲು ನಮ್ಮ ಪೂರ್ವಜರು ಪ್ರಾರಂಭಿಸಿದರು. ಆದರೆ ಇಂದು ಅವ್ಯಕ್ತ ನನ್ನು ಮರೆತು ವ್ಯಕ್ತದಲ್ಲಿಯೇ ಜನತೆ ಸಿಕ್ಕಿಕೊಂಡಿದ್ದಾರೆ. ಮೂಲವನ್ನು ಮರೆತು ಸ್ಥೂಲದಲ್ಲಿ ಬಂದು ಮೂಲದ ರಹಸ್ಯವನ್ನು ಬಿಡಿಸಿ ತಿಳಿಸಿದರೂ ಮೂಲ ವನ್ನು ಅರಿಯದವರಾಗಿದ್ದಾರೆ.

**ಪೂಜೆ ಶಿವಲಿಂಗಕ್ಕೋ ಅಥವಾ ಪೀಠಕ್ಕೋ ?**

ವಾಸ್ತವ್ಯದಲ್ಲಿ ಪೀಠಗಳಿರಲಿ, ಪೀಠಗಳಿಲ್ಲದಿರಲಿ ಶಿವಲಿಂಗಕ್ಕೇ ಪೂಜೆ ನಡೆಯುತ್ತಿದೆ. ಪೀಠಗಳಿಗೆ ಪೂಜೆ ನಡೆಯುತ್ತಿಲ್ಲ. ಶಿವಲಿಂಗವೆಂದರೆ ಈಗಿನ ಜನತೆಯ ಕಲ್ಪನೆಯೇ ಬೇರೆ. ಶಿವಲಿಂಗವೆಂದರೆ ಪೀಠಗಳ ಸಮೇತ ಇರುವ ಶಿವಲಿಂಗವನ್ನು ಮಾತ್ರ ನಮ್ಮ ಕಲ್ಪನೆಯಲ್ಲಿ ತಂದುಕೊಳ್ಳುತ್ತಾರೆ. ಪೀಠ ರಹಿತವಾದ ಕೇವಲ ಶಿವಲಿಂಗದ ರಹಸ್ಯವನ್ನು ಜನತೆ ಅರ್ಥಮಾಡಿಕೊಳ್ಳಲಾರರು. ಚೈತನ್ಯ ಜ್ಯೋತಿಸ್ವರೂಪನಾದ ಶಿವ ಪರಮಾತ್ಮನನ್ನು ಪುನರ್ ಸ್ಮರಿಸುವ ಸತ್ಯತೆಯ ಸಂಕೇತವೇ ಪೀಠರಹಿತ ಶಿವಲಿಂಗ. ಜನತೆ ಇದನ್ನು ತಿಳಿದರೆ ಮಹದರ್ಷ. ಶಿವಲಿಂಗಗಳಿಗೆ ಮಾತ್ರ ಪೂಜಿಸುವುದರಿಂದಲಾದರೂ, ತಾವು ಕೇವಲ ಶಿವಲಿಂಗ ಭಕ್ತರೆಂದೂ ಪೀಠದ ಭಕ್ತರಲ್ಲವೆಂದೂ ಮತ್ತು ಶಿವಲಿಂಗ ಹಾಗೂ ಪೀಠ ಎರಡಕ್ಕೂ ಭಕ್ತಿ ಮಾಡುತ್ತ ಹೊರಟಿಲ್ಲವೆಂಬ ಸತ್ಯವನ್ನು ಮನಗಂಡರೆ ಪರಮ ಸಂತೋಷ.

**ಪ್ರಾಚೀನ ಕಾಲದಲ್ಲಿ ಪೀಠಗಳೇ ಇಲ್ಲದೆ ಸ್ಥಾಪಿಸಿರುವ ಶಿವಲಿಂಗಗಳು :**

ಅವ್ಯಕ್ತ ಜ್ಯೋತಿಸ್ವರೂಪ ಶಿವ ಪರಮಾತ್ಮನ ರೂಪವಾದ ಜ್ಯೋತಿಯ ಆಕಾರದಲ್ಲಿ ಶಿವಲಿಂಗವನ್ನು ಅರ್ಥಾತ್ ಶಿವನ ಮೂರ್ತಿಯನ್ನು ನಾವು ಅಮರನಾಥದಲ್ಲಿ ದರ್ಶನ ಪಡೆಯುತ್ತೇವೆ. ಈ ಶಿವಲಿಂಗ ಸ್ಥಾಪನೆಯು ಭಾರತದಲ್ಲಿನ ಎಲ್ಲ ಶಿವಲಿಂಗಗಳಿಗೆ ಹೋಲಿಸಿದಾಗ ಶಿವನ ಸ್ವರೂಪವಾದ ಜ್ಯೋತಿಯಂತಹ ಆಕಾರದ ಶಿವಲಿಂಗ (ಶಿವನಮೂರ್ತಿ) ವನ್ನು ರಚಿಸಿ, ಪೀಠವೇ ಇಲ್ಲದೆ ಕೇವಲ ಶಿವಲಿಂಗವನ್ನೇ ಸ್ಥಾಪಿಸಿರುವ ವೈಶಿಷ್ಟ್ಯವು ಕಂಡು ಬರುತ್ತದೆ. ಈ ಶಿವಲಿಂಗವು ಸ್ವಯಂ ರಚಿತವಾಯಿತೆಂದು (ಸ್ವಯಂಭು-ಶಂಭು) ಭಕ್ತರು ಇದನ್ನು ನಂಬಿದ್ದಾರೆ. ಆದ್ದರಿಂದ ಶಂಭುವಿನ ರೂಪವಾದಾ ಮತ್ತು ಅಮರವಾದ ಅರ್ಥಾತ್ ಶಾಶ್ವತವಾಗಿರುವ ಈ ಶಿವಲಿಂಗಕ್ಕೆ ಅಮರನಾಥ. ಅಮರೇಶ್ವರ ಎಂದು ಮಹಿಮೆ ಮಾಡುತ್ತಾರೆ. ಭಾರತದಲ್ಲಿನ ಜ್ಯೋತಿರ್ಲಿಂಗಗಳಾದ ದ್ವಾದಶ ಶಿವಲಿಂಗಗಳಿಗೆ ಹೋಲಿಸಿ ನೋಡಿದಾಗ ಈ ಒಂದು ಲಿಂಗಕ್ಕೆ ಪೀಠವೇ ಇಲ್ಲದಿರುವುದರಿಂದ ಈ ಅಮರನಾಥ ಲಿಂಗವು ದ್ವಾದಶ ಲಿಂಗಗಳಲ್ಲಿ ಪ್ರಪ್ರಥಮವಾಗಿ ರಚಿತವಾದ ಆದಿಲಿಂಗವೆಂದು ತಿಳಿಯಬಹುದು. ಈ ಶಿವಲಿಂಗವು ದ್ವಾದಶ ಲಿಂಗಗಳಲ್ಲಿ ಪ್ರಥಮವಾಗಿ ರಚಿತವಾಗಿರುವುದರಿಂದ ಜ್ಯೋತಿಸ್ವರೂಪ ಶಿವನ ಮೂಲಸ್ವರೂಪವಾದ ಕೇವಲ ಜ್ಯೋತಿ ಆಕಾರದ ಲಿಂಗವನ್ನು ಮಾತ್ರ ಇಲ್ಲಿ ಕಾಣುತ್ತೇವೆ. ಈ ಅಮರನಾಥ ಶಿವಲಿಂಗಕ್ಕೆ ಅಂದಿನಿಂದ ಇಂದಿನವರೆಗೂ ಪೂಜೆ ಮಾಡುತ್ತಿಲ್ಲ. ಕೇವಲ ದರ್ಶನ ಮಾಡಲಾಗುತ್ತದೆ. ಈ ಶಿವಲಿಂಗ ಸ್ಥಾಪನೆಯಾದ ನಂತರ ಭಕ್ತಿಯು ಪ್ರಾರಂಭವಾಗಿ ಪೂಜೆ-ಅಭಿಷೇಕಗಳು ಪ್ರಾರಂಭವಾದುದರಿಂದ ನಂತರ ಸ್ಥಾಪಿಸಲ್ಪಟ್ಟ ಶಿವಲಿಂಗಗಳಿಗೆ ಪೀಠಗಳನ್ನು ಪರಿಸ್ಥಿತಿಗಳಿಗನುಗುಣವಾಗಿ ನಿರ್ಮಿಸಿಕೊಂಡಿರುವುದು ಕಂಡು ಬರುತ್ತದೆ.

**ಪುರಾತನ ಕಾಲದಲ್ಲಿ ಪೀಠಕ್ಕೆ ಮಹತ್ವ ಕೊಡದೆ ಸ್ಥಾಪಿಸಿದ ಲಿಂಗಗಳು ?**

ಕಾಶಿ, ರಾಮೇಶ್ವರ, ಶ್ರೀಶೈಲ ಇತ್ಯಾದಿ ಅತಿ ಪುರಾತನ ಶಿವಮಂದಿರಗಳಲ್ಲಿನ ಶಿವಲಿಂಗಗಳನ್ನು ಪರಿಶೀಲಿಸಿದಾಗ ಜ್ಯೋತಿರ್ಬಿಂದು ಸ್ವರೂಪನಾದ ಏಕೈಕ ಶಿವ ಪರಮಾತ್ಮನ ಮೂರ್ತಿಗಳನ್ನು ಅರ್ಥಾತ್ ಶಿವಲಿಂಗಗಳನ್ನು ರಚಿಸಿ, ಪ್ರತಿಷ್ಠಾಪಿಸಿಕೊಂಡು ಪೂಜಿಸುತ್ತಾ ಬಂದಿರುವುದು ಗೋಚರವಾಗುತ್ತದೆ. ಅತಿ ಪುರಾತನ ಕಾಲದ ಶಿವಮಂದಿರಗಳಲ್ಲೂ, ಇತ್ತೀಚಿನ ಶಿವಮಂದಿರಗಳನ್ನೂ ಶಿವಲಿಂಗದ ರಚನೆಯಲ್ಲಿ ಅಷ್ಟೇನೂ ವ್ಯತ್ಯಾಸಗಳು ಕಂಡುಬರುತ್ತಿಲ್ಲ. ಆದರೆ ಅತಿ ಪ್ರಾಚೀನ ಕಾಲದಲ್ಲಿ ಸ್ಥಾಪಿಸಿರುವ ರಾಮೇಶ್ವರ, ವಿಶ್ವನಾಥ, ಪಶುಪತಿನಾಥ, ಮಲ್ಲಿಕಾರ್ಜುನ ಇತ್ಯಾದಿ ದ್ವಾದಶ ಲಿಂಗಗಳೇ ಆದಿಯಾಗಿ ಎಲ್ಲ ಶಿವಲಿಂಗಗಳ ಪ್ರತಿಷ್ಠಾಪನೆ ಮಾಡುವಾಗ ಪೀಠಗಳನ್ನು ರಚಿಸಿದ್ದರೂ ಆ ಪೀಠಗಳಿಗೆ ಹೆಚ್ಚು ಮಹತ್ವವನ್ನು ಕೊಡದೇ, ಕೇವಲ ಶಿವಲಿಂಗಕ್ಕೆ ಅಭಿಷೇಕ ಮಾಡಿದ ಅಭಿಷೇಕ ಜಲ ಹರಿದು ಸಾಗಲು ಅನುಕೂಲವಾಗುವಂತೆ ಶಿಲೆಯಲ್ಲಿ ಪೀಠವನ್ನು ರಚಿಸಿಕೊಂಡು, ಭೂಮಿಯ ಸಮ-ಮಟ್ಟದಲ್ಲಿಯೇ ಶಿವಲಿಂಗವನ್ನು ಸ್ಥಾಪಿಸಿರುವುದು ಕಂಡು ಬರುತ್ತದೆ.

**ಕಾಲಕ್ರಮೇಣ ಎತ್ತರಿಸಿದ ಪೀಠಗಳಲ್ಲಿ ಪ್ರತಿಷ್ಠಾಪಿಸಿರುವ ಶಿವಲಿಂಗಗಳು :**

ಮೊದಲೇ ಪ್ರಸ್ತಾಪಿಸಿರುವಂತೆ ಪುರಾತನ ಕಾಲದಲ್ಲಿ ಶಿವಲಿಂಗಗಳ ಸ್ಥಾಪನೆಯಲ್ಲಿ ಹಾಗೂ ಇತ್ತೀಚಿನ ಶಿವಲಿಂಗಗಳ ಸ್ಥಾಪನೆಯಲ್ಲಿ ವ್ಯತ್ಯಾಸವೇನೆಂದರೆ, ಮುಖ್ಯವಾಗಿ ಮೊದಲು ಪೀಠರಹಿತ ಶಿವಲಿಂಗಗಳಿದ್ದವು. ಪೀಠಗಳಿಗೆ ಮಹತ್ವ ಕೊಡದೆ ನಂತರ ಶಿವಲಿಂಗಗಳ ಸ್ಥಾಪನೆ ಪ್ರಾರಂಭವಾಯಿತು. ಕಾಲಕ್ರಮೇಣ ತನ್ನ ಪೂಜಾನುಷ್ಠಾನಕ್ಕೆ ತಕ್ಕಂತೆ ಪೀಠಗಳನ್ನು ಬಹಳಷ್ಟು ಎತ್ತರದವರೆಗೆ ಏರಿಸಿಕೊಂಡು ಅದರ ಮೇಲೆ ಶಿವಲಿಂಗಗಳನ್ನು ಸ್ಥಾಪಿಸಿರುವುದು ಕಂಡು ಬರುತ್ತದೆ.

**ಇತ್ತೀಚೆಗೆ ತೀರ್ಥಕ್ಷೇತ್ರಗಳಲ್ಲಿನ ಶಿವನ ಗುಡಿಗಳಿಗೆ ಬದಲಾಗಿ ನಗರಗಳಲ್ಲಿಯೂ ಶಿವಲಿಂಗಗಳ ಪ್ರತಿಷ್ಠಾಪನೆ :**

ಪುರಾತನ ಕಾಲದ ಶಿವಲಿಂಗದ ದರ್ಶನ ಕ್ಷೇತ್ರಗಳಾದ ಹಿಮಾಲಯ, ಕಾಶಿ, ರಾಮೇಶ್ವರ ಮುಂತಾದವು ದೂರ ದೂರ ಪ್ರದೇಶಗಳಲ್ಲಿದ್ದು ಜನತೆ ಇಚ್ಛೆ ಪಟ್ಟಾಗ ದರ್ಶನ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಅದಕ್ಕಾಗಿ ಭಕ್ತರು ಹಾಗೂ ಮಹಾರಾಜರು ತಮ್ಮ ತಮ್ಮ ನಾಡು, ನಗರಗಳಲ್ಲಿ ಅರಮನೆ,





ಮಹಾಮನೆಗಳಲ್ಲಿ ಶಿವಲಿಂಗಗಳನ್ನು ಸ್ಥಾಪಿಸಿಕೊಂಡ ನಿದರ್ಶನಗಳನ್ನು ಕಾಣಬಹುದು. ದಕ್ಷಿಣ ಭಾರತದಲ್ಲಿ ಅನೇಕ ಕಡೆ 'ನಗರೇಶ್ವರ' ಮತ್ತು 'ವಿಶ್ವೇಶ್ವರ' ಮುಂತಾದ ಶಿವ ದೇವಾಲಯಗಳು ಇಂದಿಗೂ ಇದಕ್ಕೆ ಸಾಕ್ಷಿಯಾಗಿವೆ.

**ಪ್ರತಿದಿನ ಶಿವನ ಗುಡಿಗಳಿಗೆ ನಡೆಯಲಾರದವರ ಶಿವಪೂಜೆ:**

ಆದಿಯಿಂದ ಏಕದೇವೋಪಾಸಕರಾಗಿದ್ದ ಜನ ಕಾಲಕ್ರಮೇಣ ಅನ್ಯದೇವತೆಗಳ ಪೂಜೆ ಮಾಡಲು ಕೆಲವರು ಹೊರಟರು. ಅನೇಕ ದೇವತಾ ವಿಗ್ರಹಗಳನ್ನು ಪೂಜಿಸುವವರ ಮಾತನ್ನು ಬಿಟ್ಟು ಶಿವಲಿಂಗ ಭಕ್ತರ ಹಾಗೂ ಅದರಲ್ಲಿ ಆದ ಮಾರ್ಪಾಡುಗಳತ್ತ ನಾವು ಗಮನ ಕೊಡೋಣ. ಆದಿಯಿಂದಲೂ ಶಿವಲಿಂಗದ ಏಕದೇವೋಪಾಸನೆಯಲ್ಲಿಯೇ ಮುಂದುವರಿದವರಿಗೆ 'ಶಿವಭಕ್ತರು', 'ಶೈವರು' ಎಂದು ಕರೆಯಲಾಯಿತು. ದೂರದ ಗುಡಿಗಳಿಗೆ ಪ್ರತಿದಿನವೂ ನಡೆಯಲಾಗದೇ ಕೆಲವು ರಾಜರುಗಳು ತಮ್ಮ ಪೂಜಾನುಕೂಲಕ್ಕೆ ತಕ್ಕಂತೆ ತಮ್ಮ ಅರಮನೆಯಲ್ಲಿಯೇ ಶಿವನ ಗುಡಿಗಳನ್ನು ಕಟ್ಟಿಸಿಕೊಂಡು ಶಿವಪೂಜೆ ಮಾಡಲಾರಂಭಿಸಿದರು. ಕೆಲವು ಮಧ್ಯಮ ವರ್ಗದ ಜನ ಅವರ ಅಂತಸ್ತು ಮತ್ತು ಅನುಕೂಲತೆಗೆ ತಕ್ಕಂತೆ ಶಿವದೇವಸ್ಥಾನಗಳನ್ನು ತಮ್ಮ ಬಳಿಯಲ್ಲಿಯೇ ತಮ್ಮ ತಮ್ಮ ಊರುಗಳಲ್ಲಿ ಕಟ್ಟಿಸಿಕೊಂಡು 'ಶಿವಪೂಜೆ'ಯನ್ನು ಮಾಡತೊಡಗಿದರು.

ತಮ್ಮ ಬಳಿಯಲ್ಲಿಯೇ ದೇವಸ್ಥಾನಗಳನ್ನು ಕಟ್ಟಿಸಿಕೊಳ್ಳಲು ಸಾಧ್ಯವಾಗದಿರುವ ಬಡವರು ತಾವು ಇರುವ ಮನೆಯಲ್ಲಿಯೇ ದೇವರ ಮನೆಯನ್ನು ನಿರ್ಮಿಸಿಕೊಂಡು ಅಲ್ಲಿ ಶಿವಲಿಂಗಗಳನ್ನು ಸ್ಥಾಪಿಸಿಕೊಂಡು ಶಿವಪೂಜೆ ಮಾಡಲಾರಂಭಿಸಿದರು. ಮನೆಯೂ ವಿಶಾಲವಿಲ್ಲದ ಬಡ ಶಿವಭಕ್ತರು ತಮ್ಮ ಮನೆಯ ಗೋಡೆಯಲ್ಲಿಯೇ ಗೂಡನ್ನು ಕೊರೆದು ಅದರಲ್ಲಿ ಶಿವಲಿಂಗವನ್ನು ಸ್ಥಾಪಿಸಿಕೊಂಡು ಆರಾಧಿಸತೊಡಗಿದರು. ಇಂದೂ ಸಹ ಇಂತಹ ಸಂಪ್ರದಾಯಗಳು ಅರಮನೆಯಿಂದ ಗಿರಿ ಮನೆಯವರೆಗೆ ಶಿವಭಕ್ತರಿರುವಲ್ಲೆಲ್ಲಾ ನೋಡಲು ಸಿಗುತ್ತವೆ.

**ಗುಡಿಗಳಲ್ಲಿನ ಶಿವಲಿಂಗಗಳನ್ನು ಅಂಗದ ಮೇಲೆ ಧರಿಸಿಕೊಂಡ ನಿದರ್ಶನಗಳು :**

ಶಿವಪೂಜೆ ಮಾಡುತ್ತಿದ್ದ ಶಿವಭಕ್ತರಲ್ಲಿ ಕಾಲಚಕ್ರಾನುಸಾರವಾಗಿ ಎರಡು ಭಾಗವಾಗಿ ವಿಂಗಡಿಸಿಕೊಂಡರು. ಪೂರ್ವದಿಂದ ಬಂದ ಸಂಪ್ರದಾಯದಂತೆ ಶಿವನ ಮಂದಿರಗಳಲ್ಲಿಟ್ಟ ಸ್ಥಾವರಲಿಂಗಗಳನ್ನು ಪೂಜಿಸುವವರು ಒಂದು ಕಡೆ ಬೆಳೆದರೆ ಮತ್ತೊಂದು ಕಡೆ ಶಿವಭಕ್ತರು ತಮಗೆ, ತಮ್ಮ ಇಷ್ಟಕ್ಕನುಸಾರವಾಗಿ ಬೇಕುಬೇಕಾದಾಗ, ಬೇಕು ಬೇಕೆಂದೆಡೆಗಳಲ್ಲಿ ಪೂಜೆ, ಭಕ್ತಿಗಳನ್ನು ಅರ್ಪಿಸಲು ಹಾಗೂ ತಮಗೆ ಬರುವ ಅನಿಷ್ಟಗಳಿಂದ ದೂರ ಸರಿಯಲು ತಮಗಿಷ್ಟ ಬಂದಾಗ ಶಿವನ ಪೂಜೆ ಮಾಡಲು ಶಿವಲಿಂಗಗಳನ್ನು ಶರೀರದ ಮೇಲೆ (ಕೊರಳಿನಲ್ಲಿ) ಧರಿಸಿಕೊಂಡು ಇಷ್ಟಲಿಂಗ ಪೂಜಕರಾಗಿ ಶಿವಲಿಂಗವನ್ನು ಪೂಜಿಸುತ್ತಾ ಬಂದರು. ಆಗ ಶಿವಲಿಂಗ ಭಕ್ತರಲ್ಲಿ ಇಷ್ಟಲಿಂಗ ಭಕ್ತರಿಗೆ 'ವೀರಶೈವರೆಂತಲೂ' ಗುಡಿಗಳಲ್ಲಿ ಶಿವನನ್ನು ಪೂಜಿಸುವವರಿಗೆ 'ಶೈವರೆಂತಲೂ' ಎರಡು ಪಂಗಡಗಳಾದವು. ಶೈವರು ಶೈವ ಬ್ರಾಹ್ಮಣರಾಗಿ ಉಳಿದರು. ಅಂಗದ ಮೇಲೆ ಲಿಂಗವ ಧರಿಸಿದವರು 'ವೀರಶೈವರಾದರು'.

ವರ್ತಮಾನ ಸಮಯದಲ್ಲಿ ಯಾವ ಶಿವಪ್ರೇಮಿಯಲ್ಲಿಯೂ ಶಿವನ ಸತ್ಯ ಪರಿಚಯವು ಪ್ರಾಯಲೋಪವಾಗಿರುವುದೇ ಅಲ್ಲದೆ ಪರಮಾತ್ಮ 'ಶಿವನು' ಮತ್ತು ದೇವತಾ 'ಶಂಕರನೂ' ಒಂದೇ ಎಂಬ ಬಿಡಿಸಲಾರದ ಭಾವನೆ ಬೆಳೆದು ಕಾಯರಹಿತ ಶಿವನಿಗೆ ಕಾಯಸಹಿತ ಶಿವನನ್ನಾಗಿ ಮಾಡಿ, 'ಕಾಮಹರಾ' ಅಥವಾ 'ಕಾಮವೈರಿ' ಶಿವನಿಗೆ ಹೆಂಡತಿ-ಮಕ್ಕಳನ್ನು ಬಿಗಿದು ಕಾಮಿ, ಕ್ರೋಧಿ, ಮೋಹಿಯನ್ನಾಗಿ ಮಾಡಿರುವುದೇ ಅಲ್ಲದೇ ಅಲ್ಲ-ಸಲ್ಲದ ನಂಬಲಾರದ ದಂತಕಥೆಗಳನ್ನು ಪರಮಾತ್ಮನ ಸುತ್ತಲೂ ಸುತ್ತಿ ತಾವೂ ಕೆಟ್ಟು, ಬೇರೆಯವರನ್ನೂ ಕೆಡಿಸಿ, ಸತ್ಯಮಾರ್ಗ ರಹಿತರಾಗಿದ್ದಾರೆಂದರೂ ತಪ್ಪಾಗದು. ಶಿವಲಿಂಗದ ಬಗ್ಗೆ ಯೋನಿ ಹಾಗೂ ಶಿಶ್ನಗಳ ಅಶ್ಲೀಲ ಕಥೆಗಳನ್ನು ನಿರ್ಮಿಸಿ ಶಿವಲಿಂಗದತ್ತ ಭಕ್ತಿ ಬೆಳೆಯದಂತಹ ಹೀನಕೃತ್ಯಗಳನ್ನೆಸಗಿರುವುದನ್ನು ಕಂಡು 'ಸತ್ಯ ಶಿವಭಕ್ತ' ಅಥವಾ 'ಸತ್ಯಶಿವಪ್ರೇಮಿಯಾದವನ' ಮನ ನೋಯದಿರಲಾರದು! ಪರಮಾತ್ಮ ನಿರಾಕಾರಿ. ಜ್ಯೋತಿರ್ಬಿಂದು ಶಿವನ ಬಗ್ಗೆ ಅಶುದ್ಧ ಕಲ್ಪನೆಯ ಕಥೆಗಳನ್ನು ಕಟ್ಟಿ ಬರೆದೋದಿ, ಕೇಳಿದವರಿಗೆ ಅನೇಕ ಪಾಪ ಸಂಘಟಿಸದೆ ಇರುತ್ತದೆಯೇ? ✪

# ಭಕ್ತಿ ಭಂಡಾರಿ ಬಸವಣ್ಣನವರು

-ಶ್ರೀಮತಿ ಬಿ.ಎಸ್. ಗಂಗನಳ್ಳಿ *

ಭಾರತದ ಇತಿಹಾಸದಲ್ಲಿ ೧೨ನೆಯ ಶತಮಾನ ಸರ್ವದೃಷ್ಟಿಯಿಂದಲೂ ಕ್ರಾಂತಿಕಾರಿ ಚಳುವಳಿಯನ್ನು ಹಬ್ಬಿಸಿದ ಕಾಲ. ವಸ್ತು, ರೂಪ, ಭಾಷೆ ಇತ್ಯಾದಿಯಾಗಿ ಏಕಕಾಲಕ್ಕೆ ಬುಗಿಲೆದ್ದ ಚಳುವಳಿ ಸಮಾಜದ ಏಳಿಗೆಗಾಗಿ ಒಬ್ಬ ಮಹಾನ್ ಚಿಂತಕ ಆಲೋಚಿಸಿದ ರೀತಿ ಅನನ್ಯವಾದುದು. ಆಧ್ಯಾತ್ಮ, ಜಗತ್ತು, ಪ್ರಪಂಚ, ಪಾರಮಾರ್ಥ, ವ್ಯಷ್ಟಿ-ಸಮಷ್ಟಿ, ನಡೆ-ನುಡಿ, ಅಂತರಂಗ-ಬಹಿರಂಗ ಹೀಗೆ ವಿವಿಧತೆಯಲ್ಲಿ ಏಕತೆಯನ್ನು ಸಾಮರಸ್ಯವನ್ನು ಸಾಧಿಸಿದವರು ಭಕ್ತಿ ಭಂಡಾರಿ ಬಸವಣ್ಣನವರು.

ಭಾರತದಲ್ಲಿ ಜಾತಿಪದ್ಧತಿ, ಮೂಢನಂಬಿಕೆ, ಕಂದಾಚಾರ, ತಾಂಡವವಾಡುತ್ತಿದ್ದ ಕಾಲದಲ್ಲಿ ಭಕ್ತಿಯ ಹಣತೆಯನ್ನು ಬೆಳಗಿಸಿದ ಬಸವಣ್ಣನವರ ಕಾರ್ಯ ಶ್ಲಾಘನೀಯವಾದುದು. ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಯಾಗಿ ಅವನ ಅಧೀನಕ್ಕೊಳಪಡದೇ ರಾಜಪ್ರಭುತ್ವವನ್ನು ಧಿಕ್ಕರಿಸಿದ ಅವರ ಅಂತರಾತ್ಮ ಸಮಾಜಮುಖಿಯಾಗಿ ಸಮಾಜ ಹಿತವನ್ನು, ಲೋಕಕಲ್ಯಾಣವನ್ನು ಬಯಸಿತು. ಸ್ವಾತಂತ್ರ್ಯ, ಸಮಾನತೆ, ಆಧ್ಯಾತ್ಮ ಸಾಧನೆ, ತತ್ತ್ವಬೋಧನೆ ಇವೇ ಮೊದಲಾದವು ಅವರ ವಿಚಾರಾಂದೋಲನದ ಮೂಲ ಮಂತ್ರಗಳಾದವು.

ಬಸವಣ್ಣನವರು ಕೇವಲ ತತ್ತ್ವಬೋಧಕರಾಗಿರಲಿಲ್ಲ. ಸ್ವತಃ ತಾವು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ನುಡಿಯಲ್ಲಿ ನಡೆಯಲ್ಲೂ ಪೂರೈಸಿದವರು. ಸಂಸಾರದಲ್ಲಿದ್ದುಕೊಂಡು ಪಾರಮಾರ್ಥವನ್ನು ಸಾಧಿಸುವುದು ಕಷ್ಟಕರ. ಹಾಗೆಯೇ ಬಸವಣ್ಣನವರು ತಮ್ಮ ಮನಸ್ಸನ್ನು ನಿಯಂತ್ರಿಸುವಲ್ಲಿ ತಮಗಾದ ಕಷ್ಟಗಳನ್ನು ತೊಂದರೆಗಳನ್ನು, ಅನುಭವಗಳನ್ನು, ವಚನಗಳ ಮೂಲಕ ನಿರಹಂಕಾರ, ಮನೋಭಾವದಿಂದ ಹೇಳಿಕೊಂಡಿದ್ದಾರೆ. ಮನಸ್ಸನ್ನು ಗ್ರಹಿಸಿ ಅದೊಂದು 'ಮರ್ಕಟ', 'ಸಂಸಾರ ಗಾಳಿಯ ಸೊಡರು' ಎಂದು ಹೇಳುತ್ತಾ 'ಸಮ್ಸಾರಬಲೆಯಲ್ಲಿ ಸಿಲುಕಿದೆನಯ್ಯ, ಎನ್ನವನು ಕಾಯಯ್ಯ ಕಾಯಯ್ಯ' 'ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯ ವಿಚಾರಿಸಿದರೆ ಹುರುಳಿಲ್ಲವಯ್ಯ' ಎಂದು ನಿವೇದಿಸಿಕೊಂಡಿದ್ದಾರೆ. ಹಾಗೆಯೇ 'ಮಾವಿನಕಾಯಿಯೊಳಗೊಂದು ಎಕ್ಕೆಕಾಯಿ ನಾನಯ್ಯ' 'ನರವಿಂದ್ಯದೊಳಗೆನ್ನ ಹುಲುಗಿಳಿಯ ಮಾಡಿ ಸಲಹುತ್ತ ಶಿವಶಿವಾ ಎಂದೋದಿಸಯ್ಯ', 'ಕೂಡಲಸಂಗಮದೇವಾ ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ', 'ತಂದೆ ನೀನು, ತಾಯಿ ನೀನು ಬಂಧು ನೀನು ಬಳಗ ನೀನು ಎನಗೆ ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವ', 'ಎನ್ನ ವಾಮಕ್ಷೇಮ ನಿಮ್ಮದಯ್ಯ' ಹೀಗೆ ಹಲವಾರು ವಚನಗಳಲ್ಲಿ ಅವರ ಆತ್ಮನಿವೇದನೆ ವ್ಯಕ್ತವಾಗಿದೆ.

ಪರಿಪೂರ್ಣವಾದ ಪಕ್ವಗೊಂಡ ಮನದಾಳದ ಮಾತುಗಳು ಹೀಗೆ ಹೊರಹೊಮ್ಮಿವೆ. 'ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗೀಗಲೇ ಬರಲಿ' ಇದಕಾರಂಜುವರು ಇದಕಾರಳುಕುವರು. 'ಜಾತಸ್ಯ ಮರಣಂ ಧ್ರುವಂ' ಮರಣವೇ ಮಹಾನವಮಿ ಎಂದು ಭಾವಿಸಿದ ಅವರು ಜನನ ಮರಣಗಳ ನಡುವಿನ ಜೀವನಕ್ಕೆ ಅಂದರೆ ಅರ್ಥವತ್ತಾದ ಬದುಕಿಗೆ ಮಹತ್ವ ಕೊಟ್ಟರು.

ಷಟ್‌ಸ್ಥಲದ ಮಹಿಮೆ ಅರಿತು ಶರಣಸ್ಥಲಕ್ಕೆ ಬಂದಾಗ 'ಜೋಳವಾಳಿಯು ನಾನಲ್ಲ ವೇಳೆವಾಳಿಯು ನಾನಲ್ಲ, ಹಾಳುಗೆಟ್ಟೋಡುವ ಆಳು ನಾನಲ್ಲವಯ್ಯಾ', 'ನ್ಯಾಯನಿಷ್ಠುರಿ ದಾಕ್ಷಿಣ್ಯಪರ ನಾನಲ್ಲ' ಎಂಬ ದಿಟ್ಟತನವಿದೆ. ಬಿಜ್ಜಳನ ಹಂಗು ತಮಗಿಲ್ಲ ಎನ್ನುವುದನ್ನು 'ಊರ ಮುಂದೆ ಹಾಲಹಳ್ಳ ಹರಿಯುತ್ತಿರಲು ಓರೆಯಾವಿನ ಬೆನ್ನಲ್ಲಿ ಹರಿಯಲದೇಕಯ್ಯ ಕೂಡಲಸಂಗಯ್ಯನುಳ್ಳನ್ನಕ್ಕ ಬಿಜ್ಜಳನ ಭಂಡಾರವೆನಗೇಕಯ್ಯಾ', 'ಆರುಮುನಿದು ನಮ್ಮನೇನು ಮಾಡುವರು ಊರು ಮುನಿದು ನಮ್ಮನೆಂತು ಮಾಡುವುದು', ಹೀಗೆ ಜನನಿಂದೆಯನ್ನು ಸಹಿಸಿದ ಅವರು ಅದಕ್ಕೆ ತಕ್ಕ ಉತ್ತರವನ್ನು ಕೊಟ್ಟಿದ್ದಾರೆ. ಭಕ್ತಿಯ ಕಣಜವೇ ಆದ ಬಸವಣ್ಣನವರು ಕಿಂಕರತ್ವದಲ್ಲಿ ಶಂಕರನನ್ನು ಕಂಡವರು 'ಭಕ್ತಿಯಿಲ್ಲದ ಬಡವ ನಾನಯ್ಯ ಕಕ್ಕಯ್ಯನ ಮನೆಯಲು ಬೇಡಿದೆ ಚನ್ನಯ್ಯನ ಮನೆಯಲು ಬೇಡಿದೆ, ದಾಸಯ್ಯನ ಮನೆಯಲು ಬೇಡಿದೆ ಎಲ್ಲ ಪುರಾತನರು ನೆರೆದು ಭಕ್ತಿ ಭಿಕ್ಷವನಿಕ್ಕಿದರೆ ಎನ್ನ ಪಾತ್ರೆ ತುಂಬಿತ್ತು ಕೂಡಲಸಂಗಮದೇವಾ' 'ಭಕ್ತಿಸುಭಾಷೆಯ ನುಡಿವೆ, ನುಡಿದಂತೆ ನಡೆವೆ, ನಡೆಯೊಳಗೆ ನುಡಿಯ ಪೂರೈಸುವೆ' ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ

* ಕೆಬಿ.ಎಂ.ಪಿ.ಎಸ್. ಚಿರ್ಚನಕಲ್ಲ ಅಂಚೆ, ಮುದ್ದೇಬಿಹಾಳ ತಾಲ್ಲೂಕು, ಬಿಜಾಪುರ ಜಿಲ್ಲೆ





ಕೈಯಲ್ಲಿ ಒಂದು ಜವೆ ಕೊರತೆಯಾದರೆ ಎನ್ನನದ್ದಿ ನೀನೆದ್ದು ಹೋಗು ಕೂಡಲಸಂಗಮದೇವಾ' ಇಂಥ ಸಂದರ್ಭಗಳು ಬಸವಣ್ಣನವರ ನಿಷ್ಠಾಭಕ್ತಿಯನ್ನು ಹೇಳುತ್ತವೆ.

ದೇವ ಮತ್ತು ಭಕ್ತನ ಸಂಬಂಧ ಅದು ಅವಿನಾಭಾವ ಸಂಬಂಧ ಆದರೂ ಭಕ್ತನನ್ನು ಹಲವು ವಿಧಗಳಲ್ಲಿ ದೇವರು ಪರೀಕ್ಷಿಸುತ್ತಾನೆ. ಎಂಥ ಪರೀಕ್ಷೆಗಳು ಬಂದರೂ ಎದುರಿಸುವಲ್ಲಿ ಭಕ್ತ ಸಿದ್ಧನಿರುತ್ತಾನೆ. ಕೆಲವು ಸಲ ಬಸವಣ್ಣನವರ ಅಳಲು ಹೀಗೆ ವ್ಯಕ್ತವಾಗಿದೆ. 'ಅಕಟಕಟ ಶಿವನಿನಗಿನಿತು ಕರುಣವಿಲ್ಲ, ಅಕಟಕಟ ಶಿವನಿನಗಿನಿತು ಕೃಪೆಯಿಲ್ಲ, ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ, ಪರಲೋಕದೂರನ? ಏಕೆ ಹುಟ್ಟಿಸಿದೆ ಕೂಡಲಸಂಗಮದೇವಯ್ಯ' ಎಂದು ಹೇಳಿಕೊಂಡಿದ್ದಾನೆ.

ಏನೊಂದೂ ಬೇಡದ, ಯಾವುದಕ್ಕೂ ಆಸೆ ಪಡದ, ಯಾವ ಪದವಿಗೂ ಹಾತೊರೆಯದ ನಿಸ್ವಾರ್ಥ, ನಿರ್ಮಲ ಮನಸ್ಸು ಅವರದು. 'ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದೊಡೆ ಎತ್ತಿದೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ', 'ಬ್ರಹ್ಮ ಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ, ರುದ್ರಪದವಿಯನೊಲ್ಲೆ, ನಾನು ಮತ್ತಾವ ಪದವಿಯನೊಲ್ಲೆನಯ್ಯ ಕೂಡಲಸಂಗಮದೇವಾ ನಿಮ್ಮ ಸದ್ಭಕ್ತರ ಮಹಾಪದವಿಯನೆ ಕರುಣಿಸಯ್ಯ' ಎನ್ನುವಲ್ಲಿ ನಿಶ್ಚಿಂತೆ ಇದೆ. ಭಕ್ತ ಮತ್ತು ಭಕ್ತಿಯ ಮಹಿಮೆಯನ್ನು 'ಭಕ್ತಿಯೆಂಬುದ ಮಾಡಬಾರದು ಕರಗಸದಂತೆ ಹೋಗುತ್ತ ಕೊರೆದು ಬರುತ್ತ ಕೊಯ್ವುದು' 'ಭಕ್ತಿಯೆಬುದು ಶಿವನ ನಡುಗಿಸಿತ್ತು ಭಕ್ತಿ ಶಿವನ ಹಾಡಿಸಿ ಕುಣಿದಾಣಿಸಿತ್ತು'. 'ಕೊಲುವೆನೆಂಬ ಭಾಷೆ ದೇವನದು ಗೆಲುವೆನೆಂಬ ಭಾಷೆ ಭಕ್ತನದು ಎಂಬುದನ್ನು ಲೋಕಕ್ಕೆ ಅರುಹಿಕೊಟ್ಟರು.

ಬಸವಣ್ಣನವರು ವೈಯಕ್ತಿಕ ಏಳಿಗೆಯನ್ನು ಮಾತ್ರ ಬಯಸದೇ ಸಮಾಜದ ಏಳ್ಗೆಯನ್ನು ಬಯಸಿದವರು. ಸಮಾಜದ ಒಳಿತು-ಕೆಡುಕುಗಳನ್ನು ಆಲೋಚಿಸಿ ಸಮಾಜ ಪರಿವರ್ತನೆಯಲ್ಲಿ ತೊಡಗಿದವರು. ಸಮಾಜ ಪರಿವರ್ತನೆ ಬಯಸಿದ ಅವರು ಕೆಲವೊಂದು ಸಂದರ್ಭದಲ್ಲಿ ಢಾಂಬಿಕ ಜನರ ಕುರಿತು, ಮೂಢನಂಬಿಕೆಯನ್ನು ಆಚರಿಸುವವರನ್ನು ಕುರಿತು ತರಾಟೆಗೆ ತೆಗೆದುಕೊಂಡಿದ್ದಾರೆ. ವೇಷ ಢಂಬಕರನ್ನು ಕಂಡು- 'ಕಳ್ಳಗಂಜಿ ಕಾಡ ಹೊಕ್ಕರೆ ಹುಲಿ ತಿಂಬುದ ಮಾಬುದೇ? ಕಾಲಕ್ಕಂಜಿ ಭಕ್ತನಾದೊಡೆ ಕರ್ಮತಿಂಬುದ ಮಾಬುದೆ?' 'ಹುತ್ತವ ಬಡಿದರೆ ಹಾವು ಸಾಯಬಲ್ಲುದೆ ಅಯ್ಯಾ, ಅಘೋರ ತಪವ ಮಾಡಿದಡೇನು ಅಂತರಂಗ-ಬಹಿರಂಗ ಶುದ್ಧಿಯಿಲ್ಲದವನೆಂತು ನಂಬುವನಯ್ಯಾ ಕೂಡಲಸಂಗಮದೇವ' 'ಲೋಕದ ಡೊಂಕು ನೀವೇಕೆ ತಿದ್ದುವಿರಿ. ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ. ನೆರೆಮನೆಯ ದುಃಖಕ್ಕೆ ಅಳುವರ ಮೆಚ್ಚ ಕೂಡಲಸಂಗಮದೇವ'. 'ಪರನಿಂದೆ ನಮಗೇತಕಯ್ಯ' – ಇವೆಲ್ಲ ಆತ್ಮದ ಶುದ್ಧೀಕರಣ ಮಂತ್ರಗಳೆಂದೇ ಹೇಳಬಹುದು.

ಹಲವು ದೇವರ ಆರಾಧನೆಯನ್ನು ನಿಷೇಧಿಸುವಲ್ಲಿ- 'ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ. ಒಬ್ಬನೇ ದೇವ ಕಾಣಿರೋ ಇಬ್ಬರೆಂಬುದು ಹುಸಿ ನೋಡಾ' 'ಎಲಎಲವೋ ಒಮ್ಮೆ ಶರಣೆನ್ನೆಲವೋ ಜನ್ಮಂಗಳ ಪಾಪ ವಿನಾಶಕ್ಕೆ ಶಿವನಾಮಸ್ಮರಣೆಯೊಂದೇ ಸಾಕು ಎಂದು ಸಾರಿದ್ದಾರೆ.

ಸಮಾಜ ಸುಧಾರಣೆಗೆ ಹಾಗೂ ಗಹನವಾದ ಆಧ್ಯಾತ್ಮ ತತ್ವಗಳನ್ನು ಬೋಧಿಸುವಲ್ಲಿ ಅವರು ಆಯ್ದುಕೊಂಡದ್ದು ಆಡುನುಡಿಯನ್ನು ಜನವಾಣಿಯನ್ನು ದೇವತ್ತ್ವಕ್ಕೇರಿಸಿದ ಖ್ಯಾತಿ ಬಸವಣ್ಣನವರದು. ಅವರ ವಚನಗಳಲ್ಲಿ ಸಾಹಿತ್ಯದ ಎಲ್ಲ ಲಕ್ಷಣಗಳನ್ನು ಕಾಣುತ್ತೇವೆ. ಕಾವ್ಯದ ಸೊಬಗನ್ನು ಕಾಣುತ್ತೇವೆ. ಅವರನ್ನು ವಚನ ಸಾಹಿತ್ಯದ ಸೀಮಾಪುರುಷರೆಂದೇ ಕರೆಯಬಹುದು. ಸರಳವಾದ ಮಾತಿನಲ್ಲಿ. ಉಪಮೆ, ರೂಪಕ, ದೃಷ್ಟಾಂತ ಇವೆಲ್ಲ ತಾನೇ ತಾನಾಗಿ ಹರಿದು ಬಂದಿವೆ. 'ಮೀಸಲನು ಸೊಣಗ ಮುಟ್ಟಿದಂತೆ', 'ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸುವಂತೆ', 'ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾತೆನ್ನ ಭಕ್ತಿ' 'ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯಾ' 'ಬಡ ಪಶು ಪಂಕದಲ್ಲಿ ಬಿದ್ದಡೆ ಕಾಲಬಿಡಿವುದಲ್ಲದೆ ಬೇರೆ ಗತಿಯುಂಟೆ?' 'ಒಲೆಹತ್ತಿ ಉರಿದಡೆ ನಿಲಬಹುದಲ್ಲದೆ ಧರೆಹತ್ತಿ ಉರಿದಡೆ ನಿಲಲುಬಾರದು' 'ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು' ಹೀಗೆ ಎತ್ತು ನೋಡಿದರೂ ಬಸವಣ್ಣನವರ ವಚನಗಳು. ಬೆಲ್ಲದಚ್ಚಿನಂತೆ ಸಿಹಿ, ಓದಿದಷ್ಟೂ ಕುತೂಹಲ, ಆಹ್ಲಾದ, ಅನುಭವಿಸಿದಷ್ಟೂ ರಸಾನಂದ, ತಿಳಿದಷ್ಟೂ ಜ್ಞಾನಾಮೃತ, ಕೇಳಿದಷ್ಟು ಹಿತಕರ, ಮೆಲಿದಷ್ಟು ಮಧುರ. ಬಸವಣ್ಣನವರ ವಚನಗಳ ಅಧ್ಯಯನವೆಂದರೆ ಅದು ಸಾಗರವನ್ನು ಈಜಿದಷ್ಟು ವಿಸ್ತಾರವಾದ ಅನುಭವ, ಆತ್ಮ ಜ್ಞಾನವನ್ನು ಪಡೆದಂತೆ. ಅವರ ಒಂದೊಂದು ವಚನಗಳು ಮುತ್ತು ರತ್ನಗಳೇ ಸರಿ. ಕಾರಣ ಅವರು ಲೋಕವನ್ನು ವೀಕ್ಷಿಸಿದ ರೀತಿ ಅತ್ಯಂತ ಸೂಕ್ಷ್ಮವೆಂದೇ ಹೇಳಬೇಕು.

# ಒಂದನೆಯ ತರಗತಿಯಿಂದ ಇಂಗ್ಲಿಷ್ : ವಸಾಹತುಶಾಹಿತ್ವದ ವಿಸ್ತರಣೆಯೇ?

*

-ಅರವಿಂದ ಚೊಕ್ಕಾಡಿ

ಒಂದನೆಯ ತರಗತಿಯಿಂದ ಮಕ್ಕಳಿಗೆ ಇಂಗ್ಲಿಷ್ ಕಲಿಸಬೇಕು ಎನ್ನುವಾಗ ಕಲಿಸಲು ನಮ್ಮ ಶಾಲೆಗಳಿಗೆ ಸೂಕ್ತ ಶಿಕ್ಷಕರು ನೇಮಕವಾಗಿದ್ದಾರೆಯೇ? ಇರುವ ಶಿಕ್ಷಕರಿಗೆ ಸಾಧ್ಯವಿದೆಯೇ? ಇರುವ ಶೈಕ್ಷಣಿಕ ಪರಿಕರಗಳು ಸಾಕೇ ಅಥವಾ ಇರುವುದರ ಸಮರ್ಪಕ ಬಳಕೆಯಾಗುತ್ತಿದೆಯೇ, ಒಂದನೆಯ ತರಗತಿಯಿಂದಲೇ ಇಂಗ್ಲಿಷ್ ಕಲಿಯಲೇಬೇಕಾದ ಅಗತ್ಯವಿದೆಯೇ ಮಗುವಿಗೆ ಪ್ರಸ್ತುತ ಸನ್ನಿವೇಶದಲ್ಲಿ ಕಲಿಯುವ ಸಾಮರ್ಥ್ಯವಿದೆಯೇ ಎಂಬೆಲ್ಲ ಪ್ರಶ್ನೆಗಳಷ್ಟೆ ಅಲ್ಲದೆ ನಾವು ಮಾದರಿಯಾಗಿ ತೆಗೆದುಕೊಂಡು ಕಲಿಸುತ್ತಿರುವ ಇಂಗ್ಲಿಷ್‌ನ ಸ್ವರೂಪ ಯಾವುದು ಎಂಬುದು ಕೂಡ ತುಂಬಾ ಮುಖ್ಯ ವಾಗುತ್ತದೆ. ಯಾಕೆಂದರೆ ನಮಗೆ ಇಂಗ್ಲಿಷ್ ಬಂದುದು ಎರಡು ಭಾಷಾ ಕುಟುಂಬಗಳ ನಡುವಿನ ವೈವಾಹಿಕ ಸಂಬಂಧದಿಂದಾಗಿಯೋ ಅಥವಾ ಎರಡು ಭಾಷಾ ಸಮುದಾಯಗಳ ನಡುವಿನ ಪರಸ್ಪರ ಪ್ರೀತಿ ವಿಶ್ವಾಸಗಳ ಮೂಲಕವಾಗಿಯೋ ಅಲ್ಲ. ಬದಲಾಗಿ ಪ್ರಭುತ್ವದ ಮೂಲಕ ಅದು ಬಂದಿದೆ. ಯಾವುದೇ ಸಮಾಜದ ಪ್ರಭುತ್ವದ ಅತ್ಯಂತ ಪ್ರಬಲಾಧಿಕಾರಿಗಳು ಆ ಸಮಾಜದ ಜನರೇ ಆಗಿರುತ್ತಾರೆ ಎನ್ನುವುದೇನೋ ನಿಜ. ಆದರೆ ಯಾವುದೇ ಪ್ರಭುತ್ವಕ್ಕೆ ಇರುವುದು ರಾಜಕೀಯ ನೆಲೆಯಾಗಿದ್ದು ನಿಜವಾದ ಅರ್ಥ ದಲ್ಲಿ ಮನುಷ್ಯ ಎನ್ನುವ ಏಕೈಕ ನೆಲೆ ಹೊಂದಿರುವ ವಿಶ್ವದ ಜನಸಮುದಾಯವನ್ನು ೨೩೭ ದೇಶಗಳಾಗಿ ವಿಭಜಿಸಿ ಅದಕ್ಕೆ ಮೇರೆಗಳನ್ನು ಗುರುತಿಸಿದ್ದು ಪ್ರಭುತ್ವ ಎನ್ನುವುದನ್ನು ಗಮನಿಸಬೇಕು. ಇದು ಪ್ರಭುತ್ವದ ಕುರಿತ ಆಕ್ಷೇಪವಲ್ಲ, ಬದಲಾಗಿ ಯಾವುದೇ ಪ್ರಭುತ್ವ ಇರುವ ಸ್ಥಿತಿಯೇ ಹಾಗೆ ಎನ್ನುವ ವಾಸ್ತವವಷ್ಟೇ. ಅಂಥಲ್ಲಿ ಪ್ರಭುತ್ವವೊಂದು ಹುಟ್ಟಿ ಕೊಳ್ಳುವುದರ ಮೂಲ ನೆಲೆ ಏನು ಎನ್ನುವುದು ಗಮನಿಸ ಬೇಕಾದ ವಿಷಯ. ರಾಜಕೀಯ ಸಿದ್ಧಾಂತಿಗಳಾದ ಥಾಮಸ್ ಹಾಬ್ಸ್, ಜಾನ್‌ಲಾಕ್, ಜೀನ್‌ಜಾಕ್ ರೂಸೋ ತಮ್ಮ ಸಾಮಾಜಿಕ ಒಪ್ಪಂದದ ಸಿದ್ಧಾಂತಗಳ ಮೂಲಕ ಪ್ರಭುತ್ವದ ಉಗಮದ ಬಗ್ಗೆ ಮಂಡಿಸಿದ ಸಿದ್ಧಾಂತಗಳ ಸ್ವರೂಪದಲ್ಲಿ ಭಿನ್ನತೆ ಇದೆ, ಧೋರಣೆಗಳಲ್ಲಿ, ಸಮಾಜವನ್ನು ನೋಡಿದ ಕ್ರಮದಲ್ಲಿ, ಜನರ ಹಕ್ಕುಗಳ ಕುರಿತ ದೃಷ್ಟಿಕೋನದಲ್ಲಿ ಭಿನ್ನತೆ ಇದೆ. ಆದರೆ ಮೂವರ ಪ್ರತಿಪಾದನೆಯನ್ನೂ ಕೆಡುಕುಗಳ ನಿವಾರಣೆ ಎಂಬ ಕಾರಣವೊಂದು ಸ್ಪಷ್ಟವಾಗಿ ಇದೆ. ಕೆಡುಕು ಗಳು ಹುಟ್ಟಿಕೊಳ್ಳಲು ಕಾರಣ ಆಸೆಗಳು. ಆಸೆಗಳು ಹುಟ್ಟಿ ಕೊಳ್ಳುವುದರ ಪ್ರಭಾವಶಾಲಿ ನೆಲೆ ಆರ್ಥಿಕತೆ. ಅಂದರೆ ಆರ್ಥಿಕ ಚಟುವಟಿಕೆಗಳು ತೀವ್ರಗೊಂಡಂತೆಲ್ಲ ಉಂಟಾಗುವ ಅಸಮತೋಲನವನ್ನು ನಿವಾರಿಸುವ ದೃಷ್ಟಿಯಿಂದ ಪ್ರಭುತ್ವದ ಪ್ರಾಮುಖ್ಯ ಹೆಚ್ಚುತ್ತಾ ಹೋಗುತ್ತದೆ. ಈ ವಿಚಾರವನ್ನು ಒಂದು ಧೋರಣೆಯಾಗಿ ತೆಗೆದುಕೊಳ್ಳುವುದಾದರೆ ಹರ್ಬರ್ಟ್ ಸ್ಪೆನ್ಸರ್‌ರಂತಹ ಸಿದ್ಧಾಂತಿಗಳು ಆರ್ಥಿಕ ಚಟುವಟಿಕೆ ಹೆಚ್ಚಿದಂತೆಲ್ಲ ಉಂಟಾಗುವ ಅಸಮಾನತೆಯಿಂದ ಬದುಕುವ ಸಾಮರ್ಥ್ಯವಿಲ್ಲದವರು ನಾಶವಾಗಿ ಸಬಲರಿಂದ ಆರೋಗ್ಯಕರ ಸಮಾಜ ನಿರ್ಮಾಣವಾಗುತ್ತದೆಂಬುದರಿಂದ ಅಸಮತೋಲನದ ನಿವಾರಣೆಯ ವಿಚಾರದಲ್ಲಿ ಪ್ರಭುತ್ವ ಮೌನ ವಹಿಸಬೇಕು ಎಂದೂ ಹೇಳಿದ್ದಾರೆ. ಒಟ್ಟಾರೆಯಾಗಿ ಎರಡೂ ನೆಲೆಗಳ ವ್ಯಾಖ್ಯಾನಗಳಲ್ಲಿ ಪ್ರಭುತ್ವ ಮತ್ತು ಆರ್ಥಿಕತೆಯ ನಡುವೆ ನೇರ ಸಂಬಂಧ ಇರುವುದನ್ನು ಕಾಣಬಹುದು. ಅಂಥಲ್ಲಿ ತಾನು ಗುರುತಿಸಿಕೊಂಡಿರುವ ಸೀಮಾ ರೇಖೆಯ ಒಳಗಿರುವ ಜನಸಮುದಾಯಕ್ಕೆ ಉತ್ತರ ದಾಯಿತ್ವವಿರುವ ಪ್ರಭುತ್ವ ಆ ಸಮುದಾಯವನ್ನು ಹೆಚ್ಚು ಸಾಂಪತ್ತಿಕ ಹಿತದಿಂದ ಇಡುವ ದೃಷ್ಟಿಕೋನ ಹೊಂದಿದ್ದರೆ ಸ್ವಾಭಾವಿಕವಾಗಿ ಸ್ವಜನ ಹಿತ ಧೋರಣೆ ಇಟ್ಟುಕೊಂಡಿರುವ ಅದು ತನ್ನೊಳಗೆ ಸರಿಪಡಿಸಿಕೊಳ್ಳುವುದಕ್ಕಿಂತ ಹೆಚ್ಚಾಗಿ ಬೇರೊಂದು ಸೀಮಾರೇಖೆಯಲ್ಲಿರುವ ಪ್ರದೇಶದಿಂದ ಸಂಪತ್ತನ್ನು ಹೊಂದಿಸಿಕೊಳ್ಳಬಯಸುತ್ತದೆ. ಆಗ ಹುಟ್ಟಿ ಕೊಳ್ಳುವುದೇ ವಸಾಹತುಶಾಹಿ ನೀತಿ. ಪ್ರಭುತ್ವಕ್ಕೆ ಜನರಿಂದ ಪ್ರಾಪ್ತವಾದ ಅಧಿಕಾರ, ಸೈನ್ಯವನ್ನೆಲ್ಲ ಈ ಕೆಲಸಕ್ಕಾಗಿ ಅದು ಬಳಸಿಕೊಳ್ಳುತ್ತದೆ. ಆಗ ಸ್ಪಷ್ಟವಾಗಿ ದಬ್ಬಾಳಿಕೆ ಅರ್ಥ ವಾಗುತ್ತದೆ. ೧೯೪೭ಕ್ಕೆ ಮೊದಲು ನಡೆದದ್ದು ಇದು. ಒಂದು ವೇಳೆ ಸ್ಪೆನ್ಸರ್ ಮಾದರಿಯಲ್ಲಿ ಪ್ರಭುತ್ವ ಮೌನ ವಹಿಸಿದರೆ ಆಗ ಆರ್ಥಿಕ ಚಟುವಟಿಕೆಗಳಲ್ಲಿ ಕ್ರಿಯಾಶೀಲ ರಾಗಿರುವ ಸಾಹಸಿಗಳು ಮತ್ತೊಂದು ಸೀಮಾರೇಖೆಯ ಪ್ರದೇಶದಿಂದ ಸಾಂಪತ್ತಿಕ ಲಾಭ ಪಡೆಯಲು ಹೊರಡುತ್ತಾರೆ. ತುಂಬಾ ಸಹಜವಾಗಿ ಈ ಎರಡು ಆಕ್ರಮಣಗಳೂ ಆರ್ಥಿಕ ವಾಗಿ ಮತ್ತು ರಾಜಕೀಯವಾಗಿ ದುರ್ಬಲವಾಗಿರುವ ಪ್ರದೇಶಗಳ ಮೇಲೆ ನಡೆಯುತ್ತದೆ. ಇಂಥಲ್ಲಿ ಆರ್ಥಿಕ ಸಾಹಸಿಗಳಿಗೆ ಯಾವುದೇ ಪ್ರಭುತ್ವಕ್ಕೆ ಇರುವ ಪರಮಾಧಿಕಾರ ವಾಗಲಿ ಸೈನಿಕ ಶಕ್ತಿಯಾಗಲಿ ಇರುವುದಿಲ್ಲ ಎಂಬುದನ್ನು ಗಮನಿಸಬೇಕು. ಅಂಥಲ್ಲಿ ಅದು ತಾನು ಆಕ್ರಮಿಸುವ ಪ್ರದೇಶದ ಜನರ ಸ್ವಂತಿಕೆಯನ್ನು, ಸ್ವತಂತ್ರ ಯೋಚನಾಶಕ್ತಿ ಯನ್ನು ಬಡಿದುಹಾಕಲು ಬಯಸುತ್ತದೆ. ಅದರಿಂದಾಗಿ ಆ ಪ್ರದೇಶದ ಜನರು ಮಾನಸಿಕವಾಗಿ ಆಕ್ರಮಣಕಾರರ ಗುಲಾಮರಾಗುತ್ತಾರೆ. ಈ ದಾಳಿಯ ಮೊದಲ ಉದ್ದೇಶ ಕಲ್ಚರ್ ಆಗಿರುತ್ತದೆ. ಯಾಕೆಂದರೆ ಇಡಿ ವಿಶ್ವದ ಜನ ಸಮುದಾಯಗಳ ಆರ್ಥಿಕ ಪರಿಕರಗಳ ಬಳಕೆಯಲ್ಲಿ ಸಾಂಸ್ಕೃತಿಕ ಪ್ರಭಾವದಿಂದಾಗಿ ಭಿನ್ನ ರೂಪವಿರಲು ಸಾಧ್ಯವೇ ಹೊರತು ಆರ್ಥಿಕ ಅಗತ್ಯಗಳು ವಿಶ್ವದ ಜನರಿಗೆಲ್ಲ ಏಕರೂಪಿಯಾಗಿರುತ್ತದೆ. ಅಂಥಲ್ಲಿ ಅದು ಒಂದೇ ಒಂದು ಯೋಚನಾಕ್ರಮವನ್ನು ಮಾತ್ರ ಹುಟ್ಟು ಹಾಕಲು ಸಾಧ್ಯ. ಆದರೆ ಸಾಂಸ್ಕೃತಿಕ ಸಂಗತಿಗಳು ನಾನಾ ಹಿನ್ನಲೆಗಳಿಂದ ಪ್ರಭಾವಿತವಾಗಿ ಸಮುದಾಯದಿಂದ ಸಮುದಾಯಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ, ಸ್ಥಳದಿಂದ ಸ್ಥಳಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನರೂಪದಲ್ಲಿ ಇರುತ್ತದೆ. ಪ್ರತಿಯೊಬ್ಬ ವ್ಯಕ್ತಿಯು ತನ್ನ ಸ್ವತಂತ್ರ ಯೋಚನಾಕ್ರಮವನ್ನು ಹೊಂದಿರುವುದು ಆತ ಇಟ್ಟುಕೊಂಡಿರುವ ಸಾಂಸ್ಕೃತಿಕ ಧೋರಣೆಗಳಿಂದಾಗಿ. ಅಂಥಲ್ಲಿ ಇದನ್ನು ಏಕರೂಪಿ ನೆಲೆಗೆ ಹತ್ತಿರಗೊಳಿಸಿದ ಹಾಗೆಲ್ಲ ಸ್ವಂತಿಕೆ ನಶಿಸುತ್ತಾ ಹೋಗುತ್ತದೆ. ಅಲ್ಲಿ ದಾಸ್ಯ ಮನೋಭಾವ ಬೆಳೆಯುತ್ತದೆ.

ಸದ್ಯ ಮಾದರಿ ಇಂಗ್ಲಿಷ್ ಆಗಿ ಕಲಿಸಲಾಗುತ್ತಿರುವ ಈ ಪ್ರಕ್ರಿಯೆ ಹಲವಾರು ರೀತಿಯಲ್ಲಿ ಜಾರಿಗೊಳ್ಳುತ್ತದೆ. ಅದನ್ನೆಲ್ಲ ಇಲ್ಲಿ ಹೇಳಲು ಕಷ್ಟಸಾಧ್ಯವಾದ್ದರಿಂದ 'ಇಂಗ್ಲಿಷ್ ಉಚ್ಚಾರದ ಕ್ರಮ'ವನ್ನು ಕಲಿಸುವ ವಿಧಾನವನ್ನು ಉದಾಹರಣೆಯಾಗಿಟ್ಟುಕೊಂಡು ಈ ಅಂಶವನು ವಿಸ್ತರಿಸುತ್ತೇನೆ. ಇವತ್ತು ಶಿಕ್ಷಕರಿಗೆ ಕೊಡಲಾಗುತ್ತಿರುವ ತರಬೇತಿಗಳಲ್ಲಿ ಮಕ್ಕಳಿಗೆ ಇಂಗ್ಲಿಷ್ ಕಲಿಸುವಾಗ 'ಪ್ರಿಫೇಸ್' ಎನ್ನಬಾರದು 'ಪ್ರೆಫೀರಿಯು' ಎನ್ನಬೇಕು, 'ಬಫೆ' ಎನ್ನಬಾರದು 'ಬುಫೆ' ಎನ್ನಬೇಕು 'ಪ್ರೊನೌನ್ಸ್' ಎನ್ನಬಾರದು, 'ಪ್ರೊನನ್ಸ್' ಎನ್ನಬೇಕು ಎಂದೆಲ್ಲಾ ಹೇಳಲಾಗುತ್ತಿದ್ದು ಇದಕ್ಕಾಗಿಯೇ ತಿಂಗಳುಗಟ್ಟಲೆ ತರಬೇತಿ ಕೊಡುವಷ್ಟು ಮಹತ್ವ ಸಿಕ್ಕಿದೆ ಮತ್ತು ಇದನ್ನೇ ವಿದ್ವಾಂಸರು ಸರಿಯಾದ ಇಂಗ್ಲಿಷ್ ಎನ್ನುತ್ತಲೂ ಇದ್ದಾರೆ. ಇದರ ಅರ್ಥ ಈ ವಿದ್ವಾಂಸರೇ ನವಾವಸಾಹತು ಶಾಹಿಯ ಮೊತ್ತಮೊದಲ ಗುಲಾಮರಾಗಿದ್ದು ಗುಲಾಮಗಿರಿತನವನ್ನು ಇದರ ಮೇಲೆ ಹೇರುವ ಉಪಕರಣ ಗಳಾಗಿದ್ದಾರೆ ಎಂಬುದರ ಹೊರತಾಗಿ ಬೇರೇನೂ ಅಲ್ಲ ಯಾಕೆಂದರೆ ಇಂಗ್ಲಿಷ್ ಇರಲಿ, ಕನ್ನಡವಿರಲಿ ಯಾವುದೇ ಭಾಷೆ ಒಂದು ಸಂಸ್ಕೃತಿಯ ಅತ್ಯಂತ ಚಲನ ಶೀಲವೂ, ಸ್ಥಿತಿಸ್ಥಾಪಕವೂ ಆದ ವಾಹಕವಾಗಿದ್ದು ಯಾವಾಗ ಅದು ಯಾವುದೇ ಕಾರಣಕ್ಕೆ ಕಠಿಣಗೊಂಡು 'ಇದು ಹೀಗೆ ಇರಬೇಕು' ಎನ್ನುವ ಮೂಲಭೂತವಾದಿ ಗುಣವನ್ನು ಬೆಳೆಸಿ ಕೊಳ್ಳುತ್ತದೋ ಹಾಗೆ ಅದು ಗುಲಾಮಗಿರಿಯನ್ನು ಹೇರ ತೊಡಗುತ್ತದೆ. ಹಾಗೆಂದರೆ ಕನ್ನಡದಲ್ಲಿ ಕೂಡ ಬೇಕಷ್ಟು ಬಳಕೆಯ ಪದಗಳು ಭಾಷಿಕ ಮತ್ತು ಅರ್ಥ ಶುದ್ಧತೆಯ ದೃಷ್ಟಿಯಿಂದ ತಪ್ಪಾಗಿ ಚಲಾವಣೆಯಲ್ಲಿದೆ. ಹಾಗಂತ ಯಾರೂ ಕೂಡ 'ಅಪರೂಪ; ಎಂದರೆ 'ರೂಪವಿಲ್ಲದವನು' ಎಂದು ಅರ್ಥ; ಅದು 'ಅಪೂರ್ವ' ಎಂದಾಗಬೇಕು ಎಂದಾಗಲಿ 'ಜನಾರ್ಧನ'ದ 'ದ'ಕ್ಕೆ ಮಹಾಪ್ರಾಣ ಕೊಟ್ಟರೆ ಅದು 'ಜನರ ಹಣವನ್ನು ಲಪಟಾಯಿಸಿದವನು' ಎಂಬ ಅರ್ಥವನ್ನು ಕೊಡುತ್ತದೆ; ಆದ್ದರಿಂದ ಅದು ಮಹಾಪ್ರಾಣವಿಲ್ಲದ 'ಜನಾರ್ದನ'ವೇ ಆಗಬೇಕು ಎಂದು ವಾದಿಸಲು ಹೊರಟಿಲ್ಲ. ಹಾಗಿರುವಾಗ 'ಪ್ರಿಫೇಸ್' ಅಂದರೆ 'ಮುನ್ನುಡಿ' ಎಂದು ಅರ್ಥವಾಗುತ್ತದೆ ಎಂದ ಮೇಲೆ ಅದನ್ನು 'ಪ್ರೆಫೀರಿಯು' ಎಂದೇ ಹೇಳಬೇಕಾದ ಅಗತ್ಯವೇನು? ಇದೇ ಸರಿಯಾದ ಇಂಗ್ಲಿಷ್ ಅನ್ನುವುದಕ್ಕೆ ಮಾನದಂಡವಾದರೂ ಏನು? ನಿಜ, ಇದೆಲ್ಲ ಆಕ್ಸ್‌ಫರ್ಡ್ ಇಂಗ್ಲಿಷ್ ಇರಬಹುದು. ಆದರೆ ಆಕ್ಸ್‌ಫರ್ಡ್ ಇಂಗ್ಲೀಷನ್ನೇ ಮಾನದಂಡವೆಂದು ಘೋಷಿಸಿ ದ್ದರೆ ಆಗ ರಾಜಕೀಯ ಕಾರಣಕ್ಕಾಗಿಯಾದರೂ ಅದನ್ನು ಒಪ್ಪಿಕೊಳ್ಳಬೇಕಾದ ಅಗತ್ಯವಿತ್ತು. ಆದರೆ ನಮ್ಮ ಸಂವಿಧಾನ ವೇನೂ ಹಾಗೆ ಘೋಷಿಸಿಲ್ಲ. ಆದರೂ ಸಹ ಆಕ್ಸ್‌ಫರ್ಡ್ ಇಂಗ್ಲಿಷ್ ಅನ್ನೇ ಸರಿಯಾದ ಇಂಗ್ಲಿಷ್ ಎಂದು ಸ್ವೀಕರಿಸುವು ದಿದೆಯಲ್ಲ, ಅದು ವಸಾಹತುಶಾಹಿಯನ್ನು ಒಪ್ಪಿಕೊಂಡ ಮನೋಧರ್ಮ ಯೋಚಿಸುವ ಕ್ರಮವೂ ಆಗಿದೆ. ಗುಲಾಮ ಗಿರಿತನದ ಸಂಕೇತವೂ ಆಗಿದೆ. ಇಲ್ಲಿ ನಾವು ಅಮೆರಿಕನ್ನ

* ಕೋಡಂಗಲ್ಲು ಮತ್ತು ಅಂಚೆ, ಮೂಡಬಿದರೆ, ದಕ್ಷಿಣ ಕನ್ನಡ ಜಿಲ್ಲೆ-574 197.

ರಿಂದ ಕಲಿಯಬೇಕಾಗಿದೆ. ಇವತ್ತು ನಾವು ಅಮೆರಿಕನ ಇಂಗ್ಲಿಷ್ ಎನ್ನುತ್ತೇವಲ್ಲ, ಅಮೆರಿಕನ್ ಇಂಗ್ಲಿಷ್ ಯಾಕೆ ಹುಟ್ಟಿಕೊಂಡಿತು ಎಂದು ಯೋಚಿಸಬೇಕು. ಅದಕ್ಕೆ ಉತ್ತರ ಅಮೆರಿಕನ್ನರಿಗೆ ಇಂಗ್ಲಿಷ್ ಬೇಕಾಗಿತ್ತು. ಆದರೆ ಅವರು ಬ್ರಿಟನ್ ರಾಣಿಯ ಭಾಷಿಕ ಅಧಿಪತ್ಯದಲ್ಲಿರಲು ಸಿದ್ಧರಿರಲಿಲ್ಲ. ಅದಕ್ಕಾಗಿ ಅವರು ಇಂಗ್ಲಿಷ್‌ಗೆ ತಮ್ಮದೇ ಆದ ಹೊಸರೂಪ ಕೊಟ್ಟರು. ನಾವೂ ಸಹ ಆಕ್ಸ್‌ಫರ್ಡ್ ಯೂನಿವರ್ಸಿಟಿ ಭಾಷಿಕ ಪರಮಾಧಿಕಾರಕ್ಕೆ ಶರಣಾಗಬೇಕಾಗಿಲ್ಲ. ಇಂಗ್ಲಿಷ್ ನಮಗೂ ಬೇಕು ಅದು ಕಾಲಮಾನದ ಅಗತ್ಯ. ಕಾಲಮಾನದ ಅಗತ್ಯಗಳನ್ನು ಎದುರಿಸಿ ಇನ್ನೊಂದರಿಂದ ಪಡೆದು ತನ್ನನ್ನು ತಾನು ಸಮೃದ್ಧಗೊಳಿಸಲು ಆಧುನೀಕರಣಗೊಳಿಸಿಕೊಳ್ಳಲು ಸಾಧ್ಯವಾಗದ ಭಾಷೆಯಾಗಲಿ, ಸಂಸ್ಕೃತಿಯಾಗಲಿ ಸಂಸ್ಕೃತಿಯಲ್ಲಿ ಬಾಳುತ್ತಿರುವ ಜನರಾಗಲಿ ಸ್ವಂತಿಕೆ ಇಟ್ಟುಕೊಂಡು ಉಳಿದುಕೊಳ್ಳಲು ಸಾಧ್ಯವಾಗುವುದಿಲ್ಲ. ಅಂಥಲ್ಲಿ ಇಂಗ್ಲಿಷ್‌ನ್ನು ಕನ್ನಡೀಕರಿಸುವ ಕನ್ನಡದ ಧ್ವನಿಯನ್ನು ಅಂಗ್ಲೀಕರಿಸುವ ಪ್ರಯತ್ನಕ್ಕೆ ಮಹತ್ವವಿದೆ.

ಇಂಗ್ಲಿಷ್ ಅಂತಲ್ಲ, ಯಾವುದೇ ಭಾಷೆಯ ಶಬ್ದಗಳನ್ನು ಕನ್ನಡೀಕರಿಸುವುದು ತೀರಾ ಸುಲಭ. 'ಅ' ಅಥವಾ 'ಉ' ಪ್ರತ್ಯಯ ಸೇರಿಸಿದರೆ ಯಾವುದೇ ಶಬ್ದ ಕನ್ನಡೀಕರಣ ಗೊಂಡು ಬಿಡುತ್ತದೆ. ಹಾಗೆಯೇ ಇಂಗ್ಲಿಷ್‌ಗೆ ಕನ್ನಡದ ಧ್ವನಿ ವಿನ್ಯಾಸವನ್ನು ಕೊಡಬೇಕಾದ ಅಗತ್ಯವಿದೆ. ಅದೂ ಸಹ ಕಷ್ಟದ ಕೆಲಸವೇನಲ್ಲ. ನಮ್ಮೆಲ್ಲರ ಧ್ವನಿ ತಂತುಗಳು ತೀರಾ ಎಳೆತದಲ್ಲೇ ಒಂದು ಭಾಷೆಗೆ ಹೊಂದಿಕೊಂಡು ಬಿಟ್ಟಿರುತ್ತದೆ. ಆದ್ದರಿಂದಲೇ ಎಷ್ಟೋ ಮಂದಿ ನಿರರ್ಗಳ ವಾಗಿ ಇಂಗ್ಲಿಷ್ ಮಾತನಾಡಿದರೂ ಕನ್ನಡ ಮಾತನಾಡಿ ದಂತೆಯೇ ಕೇಳಿಸುತ್ತದೆ. ಇದರ ಬಗ್ಗೆ ಖಂಡಿತವಾಗಿ ಕೀಳರಿಮೆ ಬೇಕಾಗಿಲ್ಲ. ಬದಲಾಗಿ ಕನ್ನಡ ಭಾಷೆಗೆ ಹೊಂದಿ ಕೊಂಡ ಧ್ವನಿತಂತುಗಳನ್ನು ನಾನಾ ತರಬೇತಿ ಕೊಟ್ಟು ತಿದ್ದಿ ಗುದ್ದಿ ಆಕ್ಸಫರ್ಡೀಕರಣ ಮಾಡುವ ಪ್ರಯತ್ನವನ್ನು ಕೈಬಿಡಬೇಕು. ಅದಕ್ಕಾಗಿ ವ್ಯಯಿಸುವ ಸಮಯ, ಶ್ರಮ, ಸಂಪತ್ತನ್ನು ಪ್ರತಿಭಾವರ್ಧನೆಗಾಗಿ ಉಪಯೋಗಿಸಿದರೆ ಎಷ್ಟೋ ಒಳಿತಾಗುತ್ತದೆ. ಕಡೆಗೂ ನಮ್ಮನ್ನು ರಕ್ಷಿಸುವುದು ಸ್ವಂತಿಕೆಯ ನೆಲೆಯಲ್ಲಿ ವೃದ್ಧಿಸುವ ಪ್ರತಿಭೆಯೇ ಹೊರತು ಭಾಷಾ ಶುದ್ಧತೆಯಲ್ಲ.

ಪ್ರಯತ್ನಪೂರ್ವಕವಾಗಿ ಇಂಗ್ಲಿಷ್‌ಗೆ ಕನ್ನಡದ ಧ್ವನಿ ವಿನ್ಯಾಸವನ್ನು ಕೊಡಬೇಕಾದ ಅಗತ್ಯವೇನು ಎಂಬ ಪ್ರಶ್ನೆ ಸಹಜ. ಒಂದು ಉದಾಹರಣೆ ಗಮನಿಸಿ. ಯಾವ ಮುಜುಗರವೂ ಇಲ್ಲದೆ ನೀವು 'ಬಾಸ್ಟರ್ಡ್' ಅಂತ ನಿಂದಿಸ ಬಲ್ಲಿರಿ. ಆದರೆ ಅದನ್ನೇ 'ಸೂ.... ಮಗ' ಅಂತ ಅಷ್ಟು ಸುಲಭವಾಗಿ ನಿಂದಿಸಲಾರಿರಿ. ಯಾಕೆಂದರೆ 'ಸೂ...ಮಗ' ಎನ್ನುವಾಗ ನಾಲಗೆ ತನಕ ಬಂದ ಮಾತನ್ನು ನಿಮ್ಮ ಮೌಲ್ಯ ಪ್ರಜ್ಞೆ ತಡೆಯುತ್ತದೆ. ಸೌಜನ್ಯ ಪ್ರಜ್ಞೆ ತಡೆಯುತ್ತದೆ. ಹೀಗೆ ನಿಂದಿಸುವುದು ಸರಿಯೇ ಎಂಬ ಯೋಚನೆ ಹುಟ್ಟಿ ಕೊಳ್ಳುತ್ತದೆ. ಯೋಚಿಸುವ ಪ್ರವೃತ್ತಿ ಉಳಿದರೆ ಮಾತ್ರವೇ ಸ್ವಂತಿಕೆ, ಸ್ವಂತಿಕೆಯಿಂದ ಪ್ರತಿಭೆ ಉಳಿದೀತು. ಹಾಗಂತ ಇಂಗ್ಲಿಷ್‌ನ ಅಗತ್ಯವನ್ನು ನಿರಾಕರಿಸಲು ಬರುವುದಿಲ್ಲ. ಆಗ ಇಂಗ್ಲಿಷ್‌ನ್ನು ಕನ್ನಡದ ಧ್ವನಿ ವಿನ್ಯಾಸದಲ್ಲಿ ಕಲಿಯುವುದು ಅಗತ್ಯವಾಗುತ್ತದೆ.

ಆದರೆ ಈ ಎಲ್ಲ ಪ್ರಯತ್ನದ ಬಳಿಕವೂ ಒಂದನೇ ತರಗತಿಯಲ್ಲೇ ಇಂಗ್ಲಿಷ್ ಕಲಿಸಬೇಕಾದ ಅಗತ್ಯವಿಲ್ಲ. ಈಗ ಕಲಿಸಲು ಉದ್ದೇಶಿಸಿರುವ ಇಂಗ್ಲಿಷ್ ಆ ಭಾಷೆಯ ಸಾಂಸ್ಕೃತಿಕ ಪರಂಪರೆಯ ಉದ್ದೇಶದಿಂದೇನೂ ಅಲ್ಲ. ವ್ಯಾವಹಾರಿಕ ಉದ್ದೇಶದಿಂದ ಕಲಿಯಲೇಬೇಕಾದ ಜರೂರತ್ತು ಬಂದಾಗ ವ್ಯಾವಹಾರಿಕ ಕಾರಣಕ್ಕಾಗಿ ಭಾಷೆಯ ಕಲಿಕೆ ಬಹಳ ಸುಲಭವಾಗಿ ನಡೆದುಬಿಡುತ್ತದೆ. ಅಲ್ಲದೆ ಒಂದನೇ ತರಗತಿಯ ಮಗು ಗೊಂದಲಕ್ಕೆ ಬೀಳಲು ಸಾಧ್ಯವಿದೆ. ಕಲಿಯುವ ಆನಂದವನ್ನು ಕಳೆದುಕೊಳ್ಳಲು ಸಾಧ್ಯವಿದೆ. ಹೊರೆ ಅಧಿಕ ವಾಗುತ್ತದೆ. ಹೊರೆಯ ಅಧಿಕ್ಯ ಮಗುವನ್ನು ಬೌದ್ಧಿಕ ಬಳಲುವಿಕೆಗೆ ತಳ್ಳುತ್ತದೆ. ಈಗಾಗಲೇ ಗೊಂದಲದ ಗೂಡಾಗಿರುವ ಶಿಕ್ಷಣ ಕ್ಷೇತ್ರ ಮತ್ತಷ್ಟು ಗೊಂದಲವಾಗಲು ಸಾಧ್ಯವಿದೆ. ಜೊತೆಗೆ ಅತ್ಯಂತ ಪ್ರಭಾವಶಾಲಿಗಳಾಗಿರುವ ಆಕ್ಸ್‌ಫರ್ಡ್ ವಿದ್ವಾಂಸರ ಅಪಾಯವೂ ಉಂಟು. ನಿಧಾನ ವಾಗಿ ಎಲ್ಲವೂ ಸರಿಹೋಗುತ್ತದೆಂದು ಹೇಳಬಹುದು. ಆದರೆ ಎಲ್ಲವೂ ಸರಿಹೋಗುವ ಹೊತ್ತಿಗೆ ಲಕ್ಷ ಲಕ್ಷ ಮಕ್ಕಳ ಭವಿಷ್ಯವನ್ನು ನಾವು ಹಾಳು ಮಾಡಿರುತ್ತೇವೆ ಎನ್ನುವುದು ಸಣ್ಣ ಸಂಗತಿಯಾಗಬಾರದು. ಬದಲಾಗಿ ಈಗಿರುವಂತೆ ೫ನೇ ತರಗತಿಯಿಂದಲೇ ಇಂಗ್ಲಿಷ್ ಕಲಿಕೆ ಪ್ರಾರಂಭ ವಾಗುವುದು ಒಳ್ಳೆಯದು. ಒಂದನೇ ತರಗತಿಗೆ ಇಂಗ್ಲಿಷ್ ಕಲಿಸಲು ನಾವು ಮಾಡಿಕೊಂಡಿರುವ ಸಿದ್ಧತೆಗಳನ್ನು ಮಕ್ಕಳ ಸೃಜನಶೀಲ ಚಿಂತನೆಯನ್ನು ವೃದ್ಧಿಸುವುದಕ್ಕಾಗಿ ಬಳಸಿದರೆ ನಮ್ಮ ಮಕ್ಕಳೂ ಸಾಧನೆ ಮಾಡಬಲ್ಲರು. ದೇಶವೂ ಸಹ ಅಸಾಧಾರಣ ಪ್ರಗತಿ ಕಂಡಿತು.





# ಸಿದ್ಧರಾಮನ ಒಂದು ವಚನ–ವಿಶ್ಲೇಷಣೆ

–ಎಚ್.ಎಸ್. ಸಿದ್ಧಗಂಗಪ್ಪ *

ಭರತಭೂಮಿ ಜಗದುದ್ಧಾರಕರಾದ ಅನೇಕ ಪುಣ್ಯ ಪುರುಷರಿಗೆ ಜನ್ಮವಿತ್ತ ನಾಡು. ಭಾರತದ ಇತಿಹಾಸದಲ್ಲಿ

ಶಾಸ್ತ್ರವೆಂಬುದು ಮನ್ಮಥ, ಶಸ್ತ್ರವಯ್ಯಾ

*ವೇದಾಂತವೆಂಬುದು ಮೂಲ*
*ಮನೋವ್ಯಾಧಿಯಯ್ಯಾ*
*ಪುರಾಣವೆಂಬುದು ಮೃತವಾದವರ ಗಿರಾಣವಯ್ಯಾ*
*ತರ್ಕವೆಂಬುದು ಮರ್ಕಟಾಟವಯ್ಯಾ*
*ಆಗಮವೆಂಬುದು ಯೋಗದ ಘೋರವಯ್ಯಾ*
*ಇತಿಹಾಸವೆಂಬುದು ರಾಜರ ಕಥಾ ಭಾಗವಯ್ಯಾ*
*ಸ್ಮೃತಿಯೆಂಬುದು ಪಾಪ ಪುಣ್ಯ ವಿಚಾರವಯ್ಯಾ*
*ಆದ್ಯರ ವಚನವೆಂಬುದು ಬಹುವೇದ್ಯವಯ್ಯಾ*
*ನಮ್ಮ ಕಪಿಲ ಸಿದ್ಧಮಲ್ಲಿಕಾರ್ಜುನನ ತಿಳಿಯಲಿಕ್ಕೆ.*

ಒಂಭತ್ತು ಸಾಲುಗಳ ಒಂದು ಚಿಕ್ಕ ವಚನವಾದರೂ ವಿಶ್ಲೇಷಿಸುತ್ತಾ ಹೋದಂತೆ ನಮ್ಮ ಕಣ್ಣಮುಂದೆ ಒಂದು ವಿಶಾಲವಾದ ದಿಗಂತವೇ ನಿಲ್ಲುತ್ತದೆ. ತಾತ್ವಿಕವಾಗಿ, ಸಾಮಾಜಿಕವಾಗಿಯೂ ಕೂಡ ನಮ್ಮನ್ನು ಚಿಂತನೆಗೆ ಒಳಗುಮಾಡುತ್ತದೆ.

ಹನ್ನೆರಡನೆ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ನಡೆದ ಸಮಜೋ–ಧಾರ್ಮಿಕ ಚಳುವಳಿ ಕರ್ನಾಟಕದ ಇತಿಹಾಸದಲ್ಲಷ್ಟೇ ಅಲ್ಲ; ವಿಶ್ವದ ಇತಿಹಾಸ ದೃಷ್ಟಿಯಿಂದಲೂ ಮಹತ್ವ ಪೂರ್ಣವಾದುದು. ಬಸವಣ್ಣನವರಲ್ಲಿನ ವಿಶ್ವ ಭ್ರಾತೃತ್ವ, ಹೃದಯ ವೈಶಾಲತ್ಯತೆ ಎಲ್ಲರನ್ನೂ ಸಮಾನವಾಗಿ ಕಾಣುವ ಮೇರು ಸದೃಶ ವ್ಯಕ್ತಿತ್ವಕ್ಕೆ ಮಾರು ಹೋಗಿ ದೇಶದ ವಿವಿಧ ಭಾಗಗಳಿಂದ ನೂರಾರು ಜನರು ಕಲ್ಯಾಣದ ಕಡೆ ಮುಖ ಮಾಡಿದುದಲ್ಲದೆ ಚಳುವಳಿಯಲ್ಲಿ ಪಾಲು ಗೊಂಡರು. ಕಲ್ಯಾಣಕ್ಕೆ ಬಂದ ವಿವಿಧ ವರ್ಗಗಳ ಅಸಂಖ್ಯಾತ ಜನರು ಶಿವದೀಕ್ಷೆಯನ್ನು ಪಡೆದು ತಮ್ಮಲ್ಲಿನ ಕೀಳರಿಮೆಯನ್ನು ತೊಡದುಹಾಕಿ ನವ ಸಮಾಜ ಕಾರ್ಯದಲ್ಲಿ ಕೈಜೋಡಿಸಿದರು. ಕಲ್ಯಾಣದಲ್ಲಿ ನಡೆದ ಸಾಮಾಜಿಕ ಚಳುವಳಿಯಲ್ಲಿ ಬಹುಸಂಖ್ಯೆಯ ಶರಣ ರಿದ್ದರೂ ಅವರೆಲ್ಲರನ್ನು ಒಗ್ಗೂಡಿಸಿ ಆಂದೋಲನ ಪ್ರಗತಿಯತ್ತ ಮುನ್ನಡೆಯುವಂತೆ ಮಾಡಿದವರಲ್ಲಿ ಬಸವಣ್ಣ, ಅಲ್ಲಮ, ಅಕ್ಕಮಹಾದೇವಿ, ಚನ್ನಬಸವಣ್ಣ ಮತ್ತು ಸಿದ್ಧರಾಮ ಇವರನ್ನು ಪಂಚಮಹಾರತ್ನಗಳೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಭಕ್ತಿಗೆ ಬಸವಣ್ಣ, ಅನುಭಾವಕ್ಕೆ ಅಲ್ಲಮ, ವೈರಾಗ್ಯಕ್ಕೆ ಅಕ್ಕಮಹಾದೇವಿ, ಜ್ಞಾನಕ್ಕೆ ಚನ್ನಬಸವಣ್ಣ, ಕರ್ಮಯೋಗಕ್ಕೆ ಅಥವಾ ಕಾಯಕಕ್ಕೆ ಸಿದ್ಧರಾಮ ಇವರು ಪ್ರತಿನಿಧಿಗಳು. ಸಿದ್ಧರಾಮ ಒಬ್ಬ ಪ್ರಖರ ಚಿಂತನಕಾರ.

ಸಿದ್ಧರಾಮನ ಜೀವನ ಮತ್ತು ಸಾಧನೆಗಳ ವಿವರ ಗಳನ್ನು ಮೂರು ಹಂತಗಳಲ್ಲಿ ಗುರುತಿಸಬಹುದು. ಮೊದಲ ಹಂತ ಅವನ ಹುಟ್ಟು, ಬಾಲ್ಯ, ಜೀವನ, ರೇವಣಸಿದ್ಧರ ಮತ್ತು ಶ್ರೀ ಶೈಲದ ಮಲ್ಲಯ್ಯನವರ ದರ್ಶನ ಹಾಗೂ ಅನುಗ್ರಹದಿಂದ ಸಿದ್ಧರಾಮನ ಬದುಕಿನ ದಿಕ್ಕೇ ಬದಲಾಗುವುದು. ಎರಡನೆ ಹಂತದಲ್ಲಿ ಅಲ್ಲಮನ ದರ್ಶನ, ಮಾರ್ಗದರ್ಶನ, ಕಲ್ಯಾಣದಲ್ಲಿ ಬಸವಾದಿ ಶರಣರ ಒಡನಾಟ ಶಿವದೀಕ್ಷೆಯನ್ನು ಪಡೆಯುವುದು. ಮೂರನೆ ಹಂತದಲ್ಲಿ ಕಲ್ಯಾಣವನ್ನು ಬಿಟ್ಟು ಸೊನ್ನಲಿಗೆಗೆ ಬಂದು ಬಸವಾದಿ ಶರಣರ ಜೀವನ ಮೌಲ್ಯ ಹಾಗೂ ಸಿದ್ಧಾಂತ ಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಕೆರೆಕಟ್ಟೆಗಳನ್ನು ಕಟ್ಟಿಸುವುದರ ಮೂಲಕ ಕಾಯಕದ ಮಹತ್ವವನ್ನು, ಮೌಲ್ಯವನ್ನು ಲೋಕಕ್ಕೆ ಪ್ರಚುರ ಪಡಿಸುವುದಾಗಿದೆ.

ಸಿದ್ಧರಾಮ ತನ್ನ ಆರಾಧ್ಯ ದೈವ ಕಪಿಲ ಮಲ್ಲಿಕಾರ್ಜುನ ನನ್ನು ಅಂಕಿತವನ್ನಿಟ್ಟುಕೊಂಡು ವಚನಗಳನ್ನು ರಚಿಸಿದ್ದಾನೆ. ಡಾ.ಆರ್.ಸಿ. ಹಿರೇಮಠ ಅವರ ಸಂಪಾದನೆಯ 'ಸಿದ್ಧರಾಮೇಶ್ವರ ವಚನಗಳು (1968, ಕರ್ನಾಟಕ ವಿಶ್ವ ವಿದ್ಯಾಲಯ)ಸಂಪುಟದಲ್ಲಿ 1378 ವಚನಗಳಿದ್ದರೆ. ಡಾ.ಎಸ್.

* ನಂ.1617, ಮಾತೃಶ್ರೀ,ಸರ್.ಎಂ. ವಿಶ್ವೇಶ್ವರಯ್ಯ ಮುಂದುವರೆದ ಬಡಾವಣೆ 8ನೇ ಬ್ಲಾಕ್, ಮುದ್ದಿನ ಪಾಳ್ಯ ಮುಖ್ಯರಸ್ತೆ, ಬೆಂಗಳೂರು

ವಿದ್ಯಾಶಂಕರ ಅವರ ಸಂಪಾದನೆಯ ಸಿದ್ಧರಾಮೇಶ್ವರ ವಚನ ಸಂಪುಟ (1978, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ)ದಲ್ಲಿ 1679 ವಚನಗಳಿವೆ.

ಈ ಮೇಲಿನ ವಚನವನ್ನು ಗಮನಿಸಿದಾಗ ನಮಗೆ 12ನೇ ಶತಮಾನದಲ್ಲಿದ್ದ ಪಂಡಿತ ಪಾಮರರ ನಡುವಿನ ಅಂತರವನ್ನು ಹಾಗೂ ಶಾಸ್ತ್ರ, ವೇದ, ಪುರಾಣಗಳು, ಆಗಮಗಳು ಕೇವಲ ಪುಸ್ತಕ ವಿದ್ಯೆಯೆಂದು ಹೇಳುವುದರ ಮೂಲಕ ಮೇಲು ವರ್ಗದವರ ಶೋಷಣೆಯನ್ನು ಖಂಡಿಸಿದ್ದಾನೆ. ಪುಸ್ತಕ ವಿದ್ಯೆಯೆಂಬುದು ಕೇವಲ ಉತ್ತಮರ ಸೊತ್ತಲ್ಲ, ಅದು ಅವರಿಗಷ್ಟೇ ಸೀಮಿತವಾಗಬಾರದು, ಅದು ಎಲ್ಲರಿಗೂ ದೊರೆಯುವಂತಾಗಬೇಕು ಎಂಬುದು ಸಿದ್ಧರಾಮನ ಚಿಂತನೆಯಾಗಿತ್ತು. ಈ ಕಾರಣದಿಂದಲೇ ಶಿವಶರಣರು ಹನ್ನೆರಡನೆಯ ಶತಮಾನದಲ್ಲಿ ವೈಚಾರಿಕ ಕ್ರಾಂತಿಗೆ ಕರೆಕೊಟ್ಟರು. ಅಕ್ಷರ ವಿದ್ಯೆ ನಮ್ಮಗೆ ಜ್ಞಾನದ ಜ್ಯೋತಿಯನ್ನು ಬೆಳಗಿಸಬೇಕೆ ಹೊರತು ಮೂಢನಂಬಿಕೆ, ಮೌಢ್ಯಗಳ ಕತ್ತಲೆಯಲ್ಲಿ ಬದುಕನ್ನು ನಡೆಸುವಂತಾಗಬಾರದು ಎಂಬುದನ್ನು ವೈಚಾರಿಕತೆಯ; ವಾಸ್ತವಿಕ ನೆಲೆಯಲ್ಲಿ ತನ್ನ ಭಾವನೆಗಳನ್ನು ವಚನಗಳ ಮೂಲಕ ಅನಾವರಣಗೊಳಿಸಿದ್ದಾನೆ. ಜೊತೆಗೆ ಸಿದ್ಧರಾಮ ಶರಣರ ಜ್ಞಾನದ ಅರಿವಿನ ಮಾರ್ಗವನ್ನು ಸಮಾಜದ ಮುಂದಿಟ್ಟಿದ್ದಾನೆ.

ಸಿದ್ಧರಾಮ ತನ್ನ ಮತ್ತೊಂದು ವಚನದಲ್ಲಿ ವಿದ್ಯೆಯನ್ನು ಕುರಿತು ಸರಳವಾಗಿ ಅಷ್ಟೇ ಅರ್ಥಪೂರ್ಣವಾಗಿ ಹೇಳಿದ್ದಾನೆ;

*ವಚಿಸಿ ವಚಿಸಿ ಅನುಭವಿಯಾಗದವ ಪಿಶಾಚಿಯಯ್ಯಾ*
*ವಚಿಸಿ ಅನುಭವಿಯಾದವ ಪಂಡಿತನಯ್ಯಾ*
*ವಿದ್ಯೆ ಎಂಬುದು ಅಭ್ಯಾಸಿಕನ ಕೈವಶ*
*ಅವಿದ್ಯೆ ಎಂಬುದು ಸರ್ವರಲ್ಲಿ ವಶ*
*ವಿದ್ಯಾ ವಿದ್ಯೆಯನರಿದು ಜಗದ್ವಂದ್ಯನಾಗಬಲ್ಲಡೆ*
*ಮಹಾಪಂಡಿತ ನೋಡಾ ಕಪಿಲ ಸಿದ್ಧಮಲ್ಲಿಕಾರ್ಜುನಾ.*

*(1615)*

ಈ ವಚನದಲ್ಲಿ ಸಿದ್ಧರಾಮ ಸಾಮಾನ್ಯ ಪಾಂಡಿತ್ಯದ ಮತ್ತು ವಿದ್ಯಾವಿದ್ಯೆಯನ್ನರಿತು, ಅದನ್ನು ದಾಟಿ ಹೋಗುವ, 'ಮಹಾ' ಪಾಂಡಿತ್ಯದ ಪ್ರಸ್ತಾಪಗಳನ್ನು ಬಹುಸೊಗಸಾಗಿ ಸರಳವಾಗಿ ಹೃದಯಕ್ಕೆ ಮುಟ್ಟುವಂತೆ ನಿರೂಪಿಸಿದ್ದಾನೆ. ವಿದ್ಯೆ ಎನ್ನುವುದು ಅಭ್ಯಾಸಿಕನ ಅಂದರೆ ಶ್ರದ್ಧೆ, ಶ್ರಮಗಳಿಂದ ಅಧ್ಯಯನ ಮಾಡುವವನಿಗೆ ಕರಗತವಾಗುವುದು. ಆದರೆ ಅವಿದ್ಯೆ ಅಥವಾ ಅಜ್ಞಾನ ಸಾರ್ವತ್ರಿಕವಾದದ್ದು. ಹೀಗಿರುವಾಗ ಯಾರು ಕೇವಲ ಪುಸ್ತಕಗಳನ್ನಷ್ಟೇ ಓದುತ್ತಾನೋ ಹಾಗೂ ಹಾಗೆ ಓದಿದನ್ನೇ ಮತ್ತೆ ಮತ್ತೆ ಓದಿ ತನ್ನ ಅನುಭವಕ್ಕೆ ತಂದುಕೊಳ್ಳಲಾರದವನಾಗುತ್ತಾನೋ ಅವನು ಮತ್ತೆ ನಿಜವಾದ ಭಗವದ್ ರಹಸ್ಯವನ್ನು ಅರಿಯಲಾರದೆ ಹೋಗುತ್ತಾನೋ ಅವನು ಕೇವಲ ಪುಸ್ತಕ ಪಿಶಾಚಿಯಾಗುತ್ತಾನೆ. ಆದರೆ ಈ ವಿದ್ಯಾ-ಅವಿದ್ಯೆಗಳನ್ನು ಅರಿತು 'ನಿಜವಾದ ವಿದ್ಯೆ' ಅಥವಾ 'ಪರಾವಿದ್ಯೆ'ಯನ್ನು ಅರಿತನಾದರೆ 'ಮಹಾ ಪಂಡಿತ' ಅಥವಾ ಅನುಭಾವವನ್ನು ಅರಿತವನಾಗುತ್ತಾನೆ. ಈ ಅನುಭಾವವನ್ನು ಅರಿತುಕೊಳ್ಳುವುದಾಗಲಿ, ಅದನ್ನು ಮಾತಿನಲ್ಲಿ ಅಭಿವ್ಯಕ್ತಗೊಳಿಸುವುದಾಗಲಿ, ನಮಗೆ ಪರಿಚಿತವಾಗಿರುವ ವಾಗ್ ರಚನೆ ಅಥವಾ ವಾಕ್ ಸಿದ್ಧಿಗಳ ಮೂಲಕ ಸಾಧ್ಯವಿಲ್ಲ. ಯಾಕೆಂದರೆ ಶಿವಶರಣರ 'ವಚನ'ಗಳಲ್ಲಿ ವ್ಯಕ್ತವಾಗುವ ಆ ಪಾರಮಾರ್ಥಿಕವಾದ ಅನುಭವ ಪುಸ್ತಕ ವಿದ್ಯೆಯಿಂದಾಗಲಿ ಅಥವಾ ಅದರ ಪರಿಕರಗಳಿಗಾಗಲಿ ನಿಲುಕುವಂಥದಲ್ಲ. ಆದ್ದರಿಂದ "ವಚನಾನುಭವ ವಾಗ್ರಚನೆಯಲ್ಲ ಮನವೆ-ವಚನಾನುಭವ ವಾಗ್ರಚನೆಯಲ್ಲ, 'ವಚನಾನುಭವೋ ವಚೋನ' ಎಂಬುದು ಶ್ರುತಿ ಸಿದ್ಧ ನೋಡಾ ಕಪಿಲ ಸಿದ್ಧಮಲ್ಲಿಕಾರ್ಜುನಾ" (1598) ಎಂದಿದ್ದಾನೆ.

ಸಿದ್ಧರಾಮನ ಸಮಕಾಲೀನ ವಚನಕಾರರು ವೇದಶಾಸ್ತ್ರ ಪುರಾಣಾಗಮಗಳ ಅರ್ಥಹೀನತೆಯನ್ನು ಪ್ರತಿಪಾದಿಸಿದಂತೆ ಅವು ಎತ್ತಿ ಹಿಡಿದ ಚಾತುರ್ವರ್ಣ ವ್ಯವಸ್ಥೆಯನ್ನು ಅತ್ಯಂತ ತೀವ್ರವಾಗಿ ವಿರೋಧಿಸುತ್ತಾರೆ. ಸಿದ್ಧರಾಮನು ಮೂಲತಃ ವೇದ-ಆಗಮಾದಿಗಳ ಪ್ರಾಮಾಣ್ಯವನ್ನು ಒಪ್ಪಿದ ಶೈವ ಸಂಪ್ರದಾಯಕ್ಕೆ ಸೇರಿದವನಾಗಿ ಸೊನ್ನಲಿಗೆಯ ಕ್ಷೇತ್ರದಲ್ಲಿ ಅರ್ಚನೆ-ಹೋಮ-ಹವನಾದಿಗಳನ್ನು ಕೈಗೊಂಡವನು. ಅನಂತರ ಅವನು ಅಲ್ಲಮಪ್ರಭುವಿನ ಮಾರ್ಗದರ್ಶನದಿಂದಾಗಿ ಶರಣ





ಧರ್ಮದ ಕಕ್ಷೆಯೊಳಗೆ ಬಂದವನು. ಹೀಗೆ ಅವನು ಶರಣ ಧರ್ಮವನ್ನು ಒಪ್ಪಿಕೊಂಡನಂತರ ವೇದ-ಶಾಸ್ತ್ರ ಪುರಾಣಾಗಮಗಳನ್ನು ಕುರಿತು 'ವೇದ ವೇದಾಂತವನೋದಿದಡೇನು ಮನ ಸೂತಕವಳಿಯದನ್ನಕ್ಕ ಸಿದ್ಧ ಸಿದ್ಧಾಂತವ ಶ್ರಮಬಟ್ಟಡೇನು ಸಾಧಿಸಿ ಕೀರ್ತಿಯ ಪಡೆಯದನ್ನಕ್ಕ ? ಇವೆಲ್ಲ ಹೊರಗಣ ಮಾತು ಮತ್ತೊಂದೆ ನಮ್ಮ ಕಪಿಲಸಿದ್ಧ ಮಲ್ಲೇಶನಲ್ಲಿ ಸದಾಚಾರ ಸನ್ಮಾರ್ಗವಯ್ಯಾ' (1225), ವೇದಂಗಳು ದೈವವಲ್ಲ, ಶಾಸ್ತ್ರಂಗಳು ದೈವವಲ್ಲ, ಆಗಮಂಗಳು ದೈವವಲ್ಲ ಎಂದು ವೇದಶಾಸ್ತ್ರಗಮಗಳ ಪ್ರಾಮಾಣ್ಯವನ್ನು ನಿರಾಕರಿಸುವ ಧ್ವನಿಗಳು ಕಾಣಿಸಿಕೊಂಡಂತೆ ತೋರುತ್ತವೆ.

ಸಿದ್ಧರಾಮನು ಪುಸ್ತಕವಿದ್ಯೆಯ ನಿರರ್ಥಕತೆಯನ್ನು ಈ ಕೆಳಗಿನ ವಚನದಲ್ಲಿ ಪ್ರತಿಪಾದಿಸಿದ್ದಾನೆ;

*ವಿದ್ಯೆ ಎಂದಡೆ ಭಾರತ-ರಾಮಾಯಣವಲ್ಲ*
*ಭಾರತವೆಂದಡೆ ಭರತದೇಶದಲ್ಲಿ ಜನಿಸಿ*
*ಕಾಮಿನಿಯರ ಸೋಗುಹಾಕಿ, ಆ ದೇಶಕ್ಕಾಧಿಪತಿಯಾದ*
*ಕಥೆಯೆ ಭಾರತವಯ್ಯಾ*
*ರಾಮಾಯಣವೆಂದಡೆ ಆದಿನಾರಾಯಣನು*
*ಪೃಥ್ವಿಯೊಳು ಹುಟ್ಟಿ*
*ರಾಮನೆಂಬಭಿಧಾನವ ಧರಿಸಿ, ಸರ್ವರಂತೆ*
*ಪ್ರಪಂಚವ ಮಾಡಿ*
*ರಾಕ್ಷಸರ ಗರ್ವವನಳಿದುದೆ ರಾಮಾಯಣ*
*ಮಾಡಿ, ಉದ್ಭಟವಾದಲ್ಲಿ ಕಾಲಾಂತರವಾದರೂ*
*ಕುರುಹಿನೊಳಗಾದವಯ್ಯಾ*
*ಕಪಿಲ ಸಿದ್ಧಮಲ್ಲಿಕಾರ್ಜುನಾ.*

*(1630)*

ಈ ವಚನ ಹೊರನೋಟಕ್ಕೆ ಭಾರತ-ರಾಮಾಯಣಗಳನ್ನು ವಿರೋಧಿಸುವಂತಿದ್ದರೂ ಅಷ್ಟಕ್ಕೇ ಅದರ ಉದ್ದೇಶ ಸೀಮಿತವಾಗಿರುವಂತೆ ತೋರುವುದಿಲ್ಲ. ಬಹುಶಃ ಇದು ಪರಂಪರಾನುಗತವಾಗಿ ಬಂದ ಪುರೋಹಿತ ಶಾಹಿಯ ಸಾಂಸ್ಕೃತಿಕ ದಬ್ಬಾಳಿಕೆಗೆ ಗುರಿಯಾಗಿದ್ದ, ಶೂದ್ರವರ್ಗದ ಸಾಂಕೇತಿಕ ಪ್ರತಿಕ್ರಿಯೆಯಾಗಿ ಕಂಡುಬರುತ್ತದೆ. ವೇದ, ಶಾಸ್ತ್ರ, ಆಗಮ, ಉಪನಿಷತ್ತು, ಪುರಾಣ ಇವೆಲ್ಲವೂ ಪುಸ್ತಕ ವಿದ್ಯೆ, ಇವೆಲ್ಲ ಉತ್ತಮರ, ವಿದ್ಯೆ ಕಲಿತವರ ಸೊತ್ತು. ಇವುಗಳನ್ನು ಕೆಳವರ್ಗದವರು ಕಲಿಯಬಾರದು, ಕಲಿಯಕೂಡದು, ಅಷ್ಟೇ ಅಲ್ಲ ಕೇಳಿಸಿಕೊಳ್ಳಬಾರದು. ಇವುಗಳು ದೇವವಾಣಿಯಾಗಿರುವುದರಿಂದ ಇಲ್ಲಿ ಬಂದಿರುವುದೇ ಪ್ರಮಾಣ, ಇವುಗಳಲ್ಲಿನ ಶ್ಲೋಕಗಳನ್ನು ಸಂದರ್ಭಕ್ಕನುಗುಣವಾಗಿ ಹೇಳಿ ತಾವು ಶ್ರೇಷ್ಠರು ಎನಿಸಿಕೊಳ್ಳುವ ಹುನ್ನಾರ ಮಾಡುತ್ತಿದ್ದರು. ಅಷ್ಟೇ ಅಲ್ಲ, ತಮ್ಮ ಅಭಿಪ್ರಾಯವನ್ನು ಸಮರ್ಥಿಸಿಕೊಳ್ಳುತ್ತಿದ್ದರು. ಇವರ ಅರ್ಥರಹಿತ ವಾದವನ್ನು ಮಾನ್ಯ ಮಾಡದ ಶಿವಶರಣರು, ಜ್ಞಾನಕ್ಕೂ ವಿದ್ಯೆಗೂ ತುಂಬಾ ಅಂತರವಿದೆ. ಜ್ಞಾನವು ಅಂದರೆ ವಿದ್ಯೆಯು ವ್ಯಕ್ತಿಯ ಹುಟ್ಟಿನ ಹಿರಿತನದಿಂದಾಗಲಿ, ಓದಿನ ಬಲದಿಂದಾಲೀ ಬರುವಂತಹದ್ದಲ್ಲ. ವೇದ, ಆಗಮ, ಪುರಾಣಾದಿಗಳು ಜ್ಞಾನದ ಪರಮ ಸೀಮೆಯೂ ಅಲ್ಲ ಎಂದು ಶರಣರು ನಂಬಿದ್ದರು. ಸಂಪ್ರದಾಯಸ್ಥರು ವೇದಗಳನ್ನು ಅಸ್ಪೃಶ್ಯರು ಕೇಳಕೂಡದೆಂದು ಬೆದರಿಕೆಯೊಡ್ಡಿದಾಗ ಮಡಿವಂತಿಕೆಗೊಳಗಾದ ಆ ಜ್ಞಾನದ ಹಂಗು ತಮಗೆ ಬೇಡವೇ ಬೇಡವೆಂದು ಶಿವಶರಣರು ಸಾರಸಗಟಾಗಿ ತಿರಸ್ಕರಿಸಿದರು. ಉದಾಹರಣೆಗೆ ಅಕ್ಕ ಮಹಾದೇವಿಯ ವಚನವನ್ನು ನೋಡಬಹುದು;

*ವೇದಶಾಸ್ತ್ರ ಆಗಮ ಪುರಾಣಗಳೆಲ್ಲವೂ*
*ಕೊಟ್ಟಣವ ಕುಟ್ಟಿದ ನುಚ್ಚು ತೌಡು ಕಾಣಿಭೋ*
*ಇವ ಕುಟ್ಟಲೇಕೆ ಕುಸುಕಲೇಕೆ ?*
*ಅತ್ತಲಿತ್ತ ಹರಿವ ಮನದ ಶಿರವನರಿದಡೆ*
*ಬಚ್ಚಬರಿಯ ಬಯಲು ಚೆನ್ನಮಲ್ಲಿಕಾರ್ಜುನಾ. (ವ.305)*

ವೈದಿಕ ಧರ್ಮದ ವಿರೋಧವನ್ನು ತೋರುವ ಈ ವಚನದಲ್ಲಿ ಅಕ್ಕಿಯನ್ನೇ ಬಿಟ್ಟು ನುಚ್ಚು ತೌಡುಗಳನ್ನು ಕುಟ್ಟುವಂತೆ ಎನ್ನುವ, ಶಿವನ ಅರಿಯುವುದೇ ನಿಜದದಾರಿ ಎಂಬ ಸಮರ್ಥನೆಯಿದೆ. ಇಲ್ಲಿ ಅಕ್ಕ ಸೃಷ್ಟಿಸಿರುವ ಕೊಟ್ಟಣದಲ್ಲಿ ಕುಟ್ಟುವ ಕ್ರಿಯೆಯ ಪ್ರತೀಕ ಗಮನಿಸಬೇಕು. ಇಂಥ ಚಿಂತನೆಗಳ ಮೂಲಕ ಅಥವಾ ಈ ವಿಚಾರಗಳನ್ನು ಹೇಳುವುದಕ್ಕಾಗಿ ಅಕ್ಕಮಹಾದೇವಿ ಸೃಷ್ಟಿಸಿರುವ ದೃಷ್ಟಾಂತಗಳಲ್ಲಿ ಕೆಲಮಟ್ಟಿನ ಸಾಮಾಜಿಕ ಅಂಶಗಳನ್ನು ಗುರುತಿಸಬಹುದು.

ಪಾಂಡಿತ್ಯಕ್ಕಿಂತ ಅನುಭಾವಕ್ಕೆ ಹೃದಯ ಶುದ್ಧಿಗೆ, ಸರ್ವ ಜೀವಾನುಕಂಪೆಗೆ ಹೆಚ್ಚಿನ ಮಹತ್ವ ನೀಡಬೇಕೆಂಬುದು ಶರಣರ

ಆಶಯವಾಗಿತ್ತು. ಈ ಹಿನ್ನೆಲೆಯಲ್ಲಿ 'ವಿದ್ಯೆ ಎಂದಡೆ ಭಾರತ-ರಾಮಾಯಣವಲ್ಲ' ಎಂಬ ವಚನವನ್ನು ವಿಶ್ಲೇಷಿಸಬೇಕು. ಭಾರತವನ್ನು 'ಪಂಚಮವೇದ'ವೆಂದೂ ಭಾರತ-ರಾಮಾಯಣಗಳು ಮಹಾಕಾವ್ಯಗಳೆಂದೂ ಅವುಗಳನ್ನು ರಚಿಸಿದ ವ್ಯಾಸ-ವಾಲ್ಮೀಕಿ ಮಹಾಕವಿಗಳೆಂದೂ ಅವುಗಳನ್ನು ಪಠಿಸಿದರೆ ಇಹ-ಪರ ಸುಖ ಪ್ರಾಪ್ತಿಯಾಗುವುದೆಂದೂ ಬಹು ಹಿಂದಿನಿಂದಲೂ ಜನ ನಂಬಿಕೊಂಡು ಬಂದಿದ್ದರು. ಈ ನಂಬಿಕೆಯ ಹಿಂದೆ ಪುಸ್ತಕ ವಿದ್ಯೆಯೇ ವಿದ್ಯೆ ಎನ್ನುವ ನಂಬಿಕೆಯನ್ನಿಟ್ಟುಕೊಂಡು ಬಂದಿದ್ದರು. ನಂಬಿಕೊಂಡು ಬಂದ ತಿಳುವಳಿಕೆ ಪರಂಪರೆಯಿಂದ ನಮ್ಮನ್ನು ಆಳುತ್ತ ಬಂದಿರುವುದನ್ನು ಗಮನಿಸ ಬಹುದಾಗಿದೆ. ಮಹಾಭಾರತದಲ್ಲಿನ ಅರ್ಜುನನನ್ನು ವೀರತ್ವದ ಸಂಕೇತವಾಗಿಯೂ, ರಾಮಾಯಣದಲ್ಲಿ ಬರುವ ರಾಮನನ್ನು ಏಕಪತ್ನಿ ವ್ರತಸ್ಥನಾದ ಆದರ್ಶ ವ್ಯಕ್ತಿಯನ್ನಾಗಿ ಈ ಎರಡೂ ಮಹಾಕಾವ್ಯಗಳು ತುಂಬಾ ಸೊಗಸಾಗಿ ಚಿತ್ರಿಸಿರುವುದಕ್ಕೆ ಪುಸ್ತಕ ವಿದ್ಯೆಯಿಂದ ಸಾಧ್ಯವಾಯಿತು. ಶತಶತಮಾನಗಳಿಂದಲೂ ಪಂಡಿತರು ಈ ಮಹಾಕಾವ್ಯಗಳು ಸೂರ್ಯ-ಚಂದ್ರರಿರುವವರೆಗೂ ಉಳಿಯುವ ಕಾವ್ಯಗಳೆಂದು ಹೇಳುತ್ತಾ, ವಿಮರ್ಶೆ ಮಾಡುತ್ತಾ ಬಂದಿರುವುದನ್ನು ಈವರೆಗಿನ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದರೆ ತಿಳಿದು ಬರುವ ಸಂಗತಿಯಾಗಿದೆ. ಆದರೆ ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ಯಾರು ಪರಂಪರೆಯಿಂದ ವಂಚಿತರಾದವರನ್ನು ಮೇಲೆತ್ತುವ, ಕತ್ತಲೆಯ ಕೂಪದಲ್ಲಿಯೇ ತಮ್ಮ ಬದುಕನ್ನು ಸವೆಸುತ್ತಿದ್ದವರಿಗೆ ಅರಿವಿನ ಜ್ಯೋತಿಯನ್ನು ಹಚ್ಚುವುದರ ಮೂಲಕ ವಂಚಿತರಾದವರನ್ನು ಸಮಾಜಮುಖಿಗಳನ್ನಾಗಿ ಮಾಡುವ ಮಹತ್ತರ ಕಾರ್ಯ 12ನೇ ಶತಮಾನದ ಸಮಾಜೋಧಾರ್ಮಿಕ ಚಳುವಳಿಯಲ್ಲಿ ಪ್ರಮುಖವಾದಾಗ, ವಿದ್ಯೆ ಎಂಬುದು ಉನ್ನತವರ್ಗದವರಿಗೇ ಮೀಸಲಾದುದೆಂಬ ತತ್ವಕ್ಕೆ, ತಿಳುವಳಿಕೆಗೆ ಬೆಲೆಯಿಲ್ಲದಂತಾಯಿತು. ವಿದ್ಯೆ ಎಂಬುದು ಅಭ್ಯಾಸಿಕನ ಕೈವಶ ಎಂದು ಸಿದ್ಧರಾಮ ಹೇಳುವ ಮೂಲಕ ಯಾವ ವ್ಯಕ್ತಿಯೇ ಆಗಲಿ ಕಷ್ಟಪಟ್ಟು ಅಧ್ಯಯನ ಮಾಡಿ ಗಳಿಸುವಂತಹದ್ದು ವಿದ್ಯೆ ಎಂಬ ಭಾವಕ್ಕೆ ಒತ್ತು ಬಿದ್ದಿತು. ಅಷ್ಟೇ ಅಲ್ಲ ಲೌಕಿಕ ವಿದ್ಯೆಯೇ ನಿಜವಾದ ವಿದ್ಯೆ ಎನ್ನುವ ಪರಂಪರಾನುಗತವಾಗಿ ನಂಬಿಕೊಂಡು ಬಂದಿದ್ದ ನಂಬಿಕೆಗೆ ಬೆಲೆ ಕಡಿಮೆಯಾಯಿತು. ಹಾಗೆ ಕಡಿಮೆಯಾಗಲು ಕಾರಣ ವಚನಕಾರರಲ್ಲಿ ಬಹುತೇಕ ಮಂದಿ ಕೆಳಸ್ತರದಿಂದ ಬಂದವರಾಗಿದ್ದರು. ಅವರೆಲ್ಲ ವಿದ್ಯೆಯಿಂದ, ಸಾಮಾಜಿಕ ಸವಲತ್ತುಗಳಿಂದ ವಂಚಿತರಾದವರಾಗಿದ್ದರು. ಅವರು ಅನಕ್ಷರಸ್ಥರಾಗಿದ್ದರೂ ಲೌಕಿಕ ಭೋಗಭಾಗ್ಯಗಳು ಅವರಲ್ಲಿ ಇಲ್ಲದಿದ್ದರೂ, ನೆಮ್ಮದಿಯ ಜೀವನವನ್ನು ಸಾಗಿಸುತ್ತಿದ್ದರು. ತಮ್ಮ ಬದುಕನ್ನು ಲೌಕಿಕದಿಂದ ಅಲೌಕಿಕದತ್ತ ಮುಖ ಮಾಡುವ ತಿಳವಳಿಕೆಯನ್ನು ಅವರು ಹೊಂದಿದವರಾಗಿದ್ದರು. ಅವರಿಗೆ ಪುಸ್ತಕ ಒದಗಿಸುವ ವಿದ್ಯೆಗಿಂತ ಬದುಕು ಕಲಿಸುವ ಪಾಠ ಮುಖ್ಯವಾಗಿದ್ದಿತು. ಅವರು ಸತ್ಯ ಸದಾಚಾರಣೆಗಳ ಮೂಲಕ ತಮ್ಮನ್ನು ತಾವು ನೇರ್ಪಡಿಸಿಕೊಳ್ಳುವ, ಸುಖದ ಬೆನ್ನುಹತ್ತಿ ಹೋಗದೆ ಅಲೌಕಿಕ ಸುಖದ ಬೆನ್ನು ಹತ್ತಿ ಹೋಗುವ 'ಆತ್ಮ ವಿದ್ಯೆ'ಯ ಅರಿವು ಶರಣರ ಸಂಗದಿಂದ ಲಭ್ಯವಾಗಿತ್ತು. ಈ ವಾಸ್ತವದ ಗಟ್ಟಿ ನೆಲೆಯಲ್ಲಿ ಕರ್ಮಯೋಗಿ ಸಿದ್ಧರಾಮ 'ವಿದ್ಯೆ ಎಂದಡೆ ಭಾರತ-ರಾಮಾಯಣವಲ್ಲ' ಎಂಬ ನಿಲುವಿಗೆ ಬಂದುದು. ಅವರ ಪಾಲಿಗೆ ಭಾರತವಾಗಲೀ-ರಾಮಾಯಣವಾಗಲೀ ಅಜರಾಮರವಲ್ಲ, ಅವುಗಳಲ್ಲಿ ಬರುವ ನಾಯಕರು ಅಜರಾಮರಲ್ಲ, ಭಾರತದಲ್ಲಿ ಹುಟ್ಟಿದ ಅರ್ಜುನನು ವಿರಾಟರಾಜನ ಆ ಸ್ಥಾನದಲ್ಲಿ ಊರ್ವಶಿಯ ಶಾಪದಿಂದ ಬೃಹನ್ನಳೆಯಾಗಿ ವೇಷಧರಿಸಿ, ಕಾಲ ಕಳೆದು ಮಹಾಭಾರತ ಯುದ್ಧನಂತರ ಆ ದೇಶಕ್ಕೆ ಅಧಿಪತಿಯಾದ ಕಥೆಯೇ ಭಾರತ, ಆದಿನಾರಾಯಣನು ಭೂಮಿಯಲ್ಲಿ ಜನಿಸಿ ರಾಮನೆನ್ನುವ ಹೆಸರನ್ನು ಧರಿಸಿ, ಜನ ಮೆಚ್ಚುವಂತೆ ರಾಜ್ಯಭಾರ ಮಾಡಿ ರಾಕ್ಷಸ ರಾವಣನನ್ನು ಸಂಹಾರ ಮಾಡಿ ಅವನ ಗರ್ವವನ್ನು ಅಳಿಸಿದ ಕಥೆಯೇ ರಾಮಾಯಣ. ದುರ್ಯೋಧನ, ರಾವಣರು ಉದ್ಧಟರಾಗಿ ವರ್ತಿಸಿ ಕಾಲಾಂತರದಲ್ಲಿ ನಾಶವನ್ನು ಹೊಂದಿದರು. ಚಾಮರಸ ಹೇಳುವಂತೆ 'ರಾಮಾಯಣ-ಮಹಾಭಾರತ 'ಕಾಳಗದ ಕಥೆಗಳು' ಎನ್ನುವ ಮಾತನ್ನು ಸಿದ್ಧರಾಮನ ಲೌಕಿಕ ಚಿಂತನೆಯ ಹಿನ್ನಲೆಯಲ್ಲಿ ಗಮನಿಸಬಹುದು.





ಕೆಳವರ್ಗದವರಿಗೆ ಪ್ರವೇಶವಿಲ್ಲದ ದೇವಾಲಯ ಗಳನ್ನೇ ತಿರಸ್ಕರಿಸುವ ಮನೋಭಾವವನ್ನು ರೂಢಿಸಿ ಕೊಂಡವರು ಶರಣರು. ವೇದಗಳು ದಲಿತರನ್ನು ತಿರಸ್ಕರಿಸಿ ದರೆ, ವಚನಕಾರರು ವೇದಗಳನ್ನೇ ತಿರಸ್ಕರಿಸುವ ಐತಿಹಾಸಿಕ ಘಟನೆಗೆ ಸಾಕ್ಷಿಯಾದುದು ಶರಣರಿಗೆ ಕೆಳವರ್ಗದವರ ಬಗೆಗಿನ ಪ್ರೀತಿ, ಕಾಳಜಿಯನ್ನು ಸೂಚಿಸುತ್ತದೆ. ಶರಣ ಆದಯ್ಯ ತನ್ನ ವಚನದಲ್ಲಿ ವೇದಶಾಸ್ತ್ರಗಳ ಬಗ್ಗೆ ತನ್ನದೇ ಆದ ರೀತಿಯಲ್ಲಿ ವಿರೋಧವನ್ನು ವ್ಯಕ್ತಪಡಿಸಿದ್ದಾನೆ.

*ವೇದಂಗಳ ಹಿಂದೆ ಹರಿಯದಿರು, ಹರಿಯದಿರು*
*ಶಾಸ್ತ್ರಂಗಳ ಹಿಂದೆ ಸುಳಿಯದಿರು, ಸುಳಿಯದಿರು*
*ಪುರಾಣಂಗಳ ಹಿಂದೆ ಬಳಸದಿರು, ಬಳಸದಿರು*
*ಆಗಮಂಗಳ ಹಿಂದೆ ತೊಳಲದಿರು, ತೊಳಲದಿರು*
*ಸೌರಾಷ್ಟ್ರ ಸೋಮೇಶ್ವರನ ಕೈವಿಡಿದು*
*ಶಬ್ದಜಾಲಂಗಳಿಗೆ ಬಳಲದಿರು, ಬಳಲದಿರು.*

ಆದಯ್ಯನ ಈ ಮಾತುಗಳು ಹನ್ನೆರಡನೆ ಶತಮಾನದಲ್ಲಿದ್ದ ಶೋಷಿತ ವರ್ಗದವರ ಧ್ವನಿಯಾಗಿದೆ. ಬ್ರಾಹ್ಮಣ ಒಂದು ಜಾತಿಯಲ್ಲ, ವೇದ,ಶಾಸ್ತ್ರ, ಪುರಾಣಗಳನ್ನು ಕರಗತ ಮಾಡಿಕೊಂಡಾಕ್ಷಣ ಬ್ರಾಹ್ಮಣರು ಶ್ರೇಷ್ಠರಾಗುವುದಿಲ್ಲ. ತಮ್ಮ ನಡೆ, ನುಡಿ, ಆದರ್ಶ ಮೌಲ್ಯಗಳನ್ನು ಅಳವಡಿಸಿಕೊಂಡು ಶ್ರೇಷ್ಠರಾಗಬೇಕೆಂಬುದು ವಚನಕಾರರ ನಿಲುವಾಗಿತ್ತು.

ಮಡಿವಾಳ ಮಾಚಯ್ಯ ಒಬ್ಬ ಅಪ್ರತಿಮ ವಿಚಾರವಾದಿ, ಚಿಂತನಶೀಲ, ತನಗನಿಸಿದ್ದನ್ನು ನಿರ್ಭಯವಾಗಿ ಹೇಳುವ ಎದೆಗಾರಿಕೆಯುಳ್ಳವನು. ಸ್ವಾಭಿಮಾನಿ, ಅನ್ಯಾಯದ ವಿರುದ್ಧ ಪ್ರತಿಭಟಿಸುವ ಅಪ್ರತಿಮ ಹೋರಾಟಗಾರ, ಯಾವುದು ಸತ್ಯವೋ ಅದನ್ನು ಅನುಸರಿಸಿದವನು. ಯಾವುದು ತನ್ನ ಅನುಭವದ ವ್ಯಾಪ್ತಿಯಲ್ಲಿ ಬರುತ್ತದೆಯೋ ಅದನ್ನು ಆಚರಿಸಿದವನು. ಈ ದೃಷ್ಟಿಯಿಂದ ಅವನ ಚಿಂತನೆಗಳು, ವಿಚಾರಗಳು ಮೌಲಿಕವಾದವುಗಳು. ವೇದ, ಪುರಾಣ, ಶಾಸ್ತ್ರಗಳ ಬಗ್ಗೆ ಅವರ ಅಭಿಪ್ರಾಯಗಳು ಗಮನಾರ್ಹವಾಗಿವೆ.

*ವೇದ ವಿಪ್ರರ ಬೋಧೆ-ಶಾಸ್ತ್ರ ಸಂತೆಯ ಮಾತು*
*ಪುರಾಣ ಪುಂಡರ ಗೋಷ್ಠಿ, ಆಗಮ ಅಸತ್ಯದ ನುಡಿ,*
*ತರ್ಕ ವ್ಯಾಕರಣ ಕವಿತ್ವದ ಪ್ರೌಢಿಮೆ, ಇದು ಕಾರಣ*
*ತನ್ನೊಳಗರಿದ ಅನುಭಾವದಿಂದ*
*ಘನವಲ್ಲಿಂದ ಕಲಿದೇವರ ದೇವಾ.*

ಸಂತೆಯ ಮಾತು, ಪುಂಡರಗೋಷ್ಠಿ, ಅಸತ್ಯದ ನುಡಿ, ಈ ಮಾತುಗಳು ವೇದ, ಶಾಸ್ತ್ರ, ಆಗಮಗಳು ಅರ್ಥಹೀನ ಎಂಬುದನ್ನು ಸ್ಪಷ್ಟವಾಗಿ ಹೇಳಿದ್ದಾನೆ.

ಅನುಭಾವಿ ಅಲ್ಲಮ ಪ್ರಭು ಮಾತನ್ನು ಜ್ಯೋತಿಯಾಗಿಸಿದವನು. ಅವನಾಡಿದ ಒಂದೊಂದು ಶಬ್ದಗಳೂ ದಿಗಂತದಷ್ಟೇ ವಿಶಾಲ. ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದಂತೆಲ್ಲಾ ಅದು ವಿಸ್ತಾರವಾಗುತ್ತಾ ಹೋಗುವುದನ್ನು ಅವನ ವಚನಗಳಲ್ಲಿ ಕಾಣಬಹುದು. ವೇದ ಶಾಸ್ತ್ರ ಪುರಾಣಗಳನ್ನು ಕುರಿತು ತನ್ನದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ.

*ವೇದವೆಂಬುದು ಓದಿನ ಮಾತು*
*ಶಾಸ್ತ್ರವೆಂಬುದು ಸಂತೆಯ ಸುದ್ದಿ*
*ಪುರಾಣವೆಂಬುದು ಪುಂಡರ ಗೋಷ್ಠಿ*
*ತರ್ಕವೆಂಬುದು ತಗರ ಹೋರಟೆ*
*ಭಕ್ತಿ ಎಂಬುದು ತೋರಿ ಉಂಬ ಲಾಭ*
*ಗುಹೇಶ್ವರನೆಂಬುದು ಮೀರಿದ ಘನವು.*

ಮಡಿವಾಳ ಮಾಚಯ್ಯ ಬಳಸಿರುವ ಶಬ್ದ ಅಲ್ಲಮ ಪ್ರಭು ಬಳಸಿರುವ ಶಬ್ದವೂ ಒಂದೇ ರೀತಿಯಲ್ಲಿರುವುದು ಕಂಡು ಬರುತ್ತದೆ. ಮಡಿವಾಳ ಮಾಚಯ್ಯ ಶಾಸ್ತ್ರವನ್ನು ಸಂತೆಯ ಮಾತು ಎಂದು ಹೇಳಿದರೆ. ಅಲ್ಲಮಪ್ರಭು ಸಂತೆಯ ಸುದ್ದಿ ಎಂದು ಹೇಳಿದ್ದಾರೆ. ಪುರಾಣವನ್ನು ಪುಂಡರ ಗೋಷ್ಠಿ ಎಂದು ಮಡಿವಾಳ ಮಾಚಯ್ಯ, ಅಲ್ಲಮ ಪ್ರಭು ಇಬ್ಬರೂ ಹೇಳಿದ್ದಾರೆ. ಇಲ್ಲಿ ಯಾರ ಪ್ರಭಾವ ಯಾರ ಮೇಲಾಗಿದೆ ಎಂದು ಹೇಳವುದು ಕಷ್ಟ ಇಬ್ಬರೂ ಸಮಕಾಲೀನರು. ಇಬ್ಬರೂ ಪ್ರತಿಭಾವಂತರು. ಇಬ್ಬರೂ ಸಮಾನ ಮನಸ್ಕರಾಗಿದ್ದರಿಂದ ಅವರಿಬ್ಬರ ಅಭಿಪ್ರಾಯ ಒಂದೇ ಆಗಿರಬಹುದೆಂದು ಊಹಿಸ ಬಹುದಾಗಿದೆ.

ಬಸವಣ್ಣನವರೂ ವೇದ, ಶಾಸ್ತ್ರ ಆಗಮವನ್ನು ತಮ್ಮದೇ ಆದ ರೀತಿಯಲ್ಲಿ ಖಂಡಿಸಿದ್ದಾರೆ;

*ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ*
*ತರ್ಕದ ಬೆನ್ನ ಬಾರನೆತ್ತುವೆ*
*ಆಗಮದ ಮೂಗಕೊಯ್ಯುವೆ ನೋಡಯ್ಯಾ*

ಆಶಯವಾಗಿತ್ತು. ಈ ಹಿನ್ನೆಲೆಯಲ್ಲಿ 'ವಿದ್ಯೆ ಎಂದಡೆ ಭಾರತ-ರಾಮಾಯಣವಲ್ಲ' ಎಂಬ ವಚನವನ್ನು ವಿಶ್ಲೇಷಿಸಬೇಕು. ಭಾರತವನ್ನು 'ಪಂಚಮವೇದ'ವೆಂದೂ ಭಾರತ-ರಾಮಾಯಣಗಳು ಮಹಾಕಾವ್ಯಗಳೆಂದೂ ಅವುಗಳನ್ನು ರಚಿಸಿದ ವ್ಯಾಸ-ವಾಲ್ಮೀಕಿ ಮಹಾಕವಿಗಳೆಂದೂ ಅವುಗಳನ್ನು ಪಠಿಸಿದರೆ ಇಹ-ಪರ ಸುಖ ಪ್ರಾಪ್ತಿಯಾಗುವುದೆಂದೂ ಬಹು ಹಿಂದಿನಿಂದಲೂ ಜನ ನಂಬಿಕೊಂಡು ಬಂದಿದ್ದರು. ಈ ನಂಬಿಕೆಯ ಹಿಂದೆ ಪುಸ್ತಕ ವಿದ್ಯೆಯೇ ವಿದ್ಯೆ ಎನ್ನುವ ನಂಬಿಕೆಯನ್ನಿಟ್ಟುಕೊಂಡು ಬಂದಿದ್ದರು. ನಂಬಿಕೊಂಡು ಬಂದ ತಿಳುವಳಿಕೆ ಪರಂಪರೆಯಿಂದ ನಮ್ಮನ್ನು ಆಳುತ್ತ ಬಂದಿರುವುದನ್ನು ಗಮನಿಸ ಬಹುದಾಗಿದೆ. ಮಹಾಭಾರತದಲ್ಲಿನ ಅರ್ಜುನನನ್ನು ವೀರತ್ವದ ಸಂಕೇತವಾಗಿಯೂ, ರಾಮಾಯಣದಲ್ಲಿ ಬರುವ ರಾಮನನ್ನು ಏಕಪತ್ನಿ ವ್ರತಸ್ಥನಾದ ಆದರ್ಶ ವ್ಯಕ್ತಿಯನ್ನಾಗಿ ಈ ಎರಡೂ ಮಹಾಕಾವ್ಯಗಳು ತುಂಬಾ ಸೊಗಸಾಗಿ ಚಿತ್ರಿಸಿರುವುದಕ್ಕೆ ಪುಸ್ತಕ ವಿದ್ಯೆಯಿಂದ ಸಾಧ್ಯವಾಯಿತು. ಶತಶತಮಾನಗಳಿಂದಲೂ ಪಂಡಿತರು ಈ ಮಹಾಕಾವ್ಯಗಳು ಸೂರ್ಯ ಚಂದ್ರರಿರುವವರಿಗೂ ಉಳಿಯುವ ಕಾವ್ಯಗಳೆಂದು ಹೇಳುತ್ತಾ, ವಿಮರ್ಶೆ ಮಾಡುತ್ತಾ ಬಂದಿರುವುದನ್ನು ಈವರೆಗಿನ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದರೆ ತಿಳಿದು ಬರುವ ಸಂಗತಿಯಾಗಿದೆ. ಆದರೆ ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ಯಾರು ಪರಂಪರೆಯಿಂದ ವಂಚಿತರಾದವರನ್ನು ಮೇಲೆತ್ತುವ, ಕತ್ತಲೆಯ ಕೂಪದಲ್ಲಿಯೇ ತಮ್ಮ ಬದುಕನ್ನು ಸವೆಸುತ್ತಿದ್ದವರಿಗೆ ಅರಿವಿನ ಜ್ಯೋತಿಯನ್ನು ಹಚ್ಚುವುದರ ಮೂಲಕ ವಂಚಿತರಾದವರನ್ನು ಸಮಾಜಮುಖಿಗಳನ್ನಾಗಿ ಮಾಡುವ ಮಹತ್ತರ ಕಾರ್ಯ 12ನೇ ಶತಮಾನದ ಸಮಾಜೋಧಾರ್ಮಿಕ ಚಳುವಳಿಯಲ್ಲಿ ಪ್ರಮುಖವಾದಾಗ, ವಿದ್ಯೆ ಎಂಬುದು ಉನ್ನತವರ್ಗದವರಿಗೇ ಮೀಸಲಾದುದೆಂಬ ತತ್ವಕ್ಕೆ, ತಿಳುವಳಿಕೆಗೆ ಬೆಲೆಯಿಲ್ಲದಂತಾಯಿತು. ವಿದ್ಯೆ ಎಂಬುದು ಅಭ್ಯಾಸಿಕನ ಕೈವಶ ಎಂದು ಸಿದ್ಧರಾಮ ಹೇಳುವ ಮೂಲಕ ಯಾವ ವ್ಯಕ್ತಿಯೇ ಆಗಲಿ ಕಷ್ಟಪಟ್ಟು ಅಧ್ಯಯನ ಮಾಡಿ ಗಳಿಸುವಂತಹದ್ದು ವಿದ್ಯೆ ಎಂಬ ಭಾವಕ್ಕೆ ಒತ್ತು ಬಿದ್ದಿತು. ಅಷ್ಟೇ ಅಲ್ಲ ಲೌಕಿಕ ವಿದ್ಯೆಯೇ ನಿಜವಾದ ವಿದ್ಯೆ ಎನ್ನುವ ಪರಂಪರಾನುಗತವಾಗಿ ನಂಬಿಕೊಂಡು ಬಂದಿದ್ದ ನಂಬಿಕೆಗೆ ಬೆಲೆ ಕಡಿಮೆಯಾಯಿತು. ಹಾಗೆ ಕಡಿಮೆಯಾಗಲು ಕಾರಣ ವಚನಕಾರರಲ್ಲಿ ಬಹುತೇಕ ಮಂದಿ ಕೆಳಸ್ತರದಿಂದ ಬಂದವರಾಗಿದ್ದರು. ಅವರೆಲ್ಲ ವಿದ್ಯೆಯಿಂದ, ಸಾಮಾಜಿಕ ಸವಲತ್ತುಗಳಿಂದ ವಂಚಿತರಾದವರಾಗಿದ್ದರು. ಅವರು ಅನಕ್ಷರಸ್ಥರಾಗಿದ್ದರೂ ಲೌಕಿಕ ಭೋಗಭಾಗ್ಯಗಳು ಅವರಲ್ಲಿ ಇಲ್ಲದಿದ್ದರೂ, ನೆಮ್ಮದಿಯ ಜೀವನವನ್ನು ಸಾಗಿಸುತ್ತಿದ್ದರು. ತಮ್ಮ ಬದುಕನ್ನು ಲೌಕಿಕದಿಂದ ಅಲೌಕಿಕದತ್ತ ಮುಖ ಮಾಡುವ ತಿಳವಳಿಕೆಯನ್ನು ಅವರು ಹೊಂದಿದವರಾಗಿದ್ದರು. ಅವರಿಗೆ ಪುಸ್ತಕ ಒದಗಿಸುವ ವಿದ್ಯೆಗಿಂತ ಬದುಕು ಕಲಿಸುವ ಪಾಠ ಮುಖ್ಯವಾಗಿದ್ದಿತು. ಅವರು ಸತ್ಯ ಸದಾಚಾರಣೆಗಳ ಮೂಲಕ ತಮ್ಮನ್ನು ತಾವು ನೇರ್ಪಡಿಸಿಕೊಳ್ಳುವ, ಸುಖದ ಬೆನ್ನುಹತ್ತಿ ಹೋಗದೆ ಅಲೌಕಿಕ ಸುಖದ ಬೆನ್ನು ಹತ್ತಿ ಹೋಗುವ 'ಆತ್ಮ ವಿದ್ಯೆ'ಯ ಅರಿವು ಶರಣರ ಸಂಗದಿಂದ ಲಭ್ಯವಾಗಿತ್ತು. ಈ ವಾಸ್ತವದ ಗಟ್ಟಿ ನೆಲೆಯಲ್ಲಿ ಕರ್ಮಯೋಗಿ ಸಿದ್ಧರಾಮ 'ವಿದ್ಯೆ ಎಂದಡೆ ಭಾರತ-ರಾಮಾಯಣವಲ್ಲ' ಎಂಬ ನಿಲುವಿಗೆ ಬಂದುದು. ಅವರ ಪಾಲಿಗೆ ಭಾರತವಾಗಲೀ-ರಾಮಾಯಣವಾಗಲೀ ಅಜರಾಮರವಲ್ಲ, ಅವುಗಳಲ್ಲಿ ಬರುವ ನಾಯಕರು ಅಜರಾಮರಲ್ಲ, ಭಾರತದಲ್ಲಿ ಹುಟ್ಟಿದ ಅರ್ಜುನನು ವಿರಾಟರಾಜನ ಆ ಸ್ಥಾನದಲ್ಲಿ ಊರ್ವಶಿಯ ಶಾಪದಿಂದ ಬೃಹನ್ನಳೆಯಾಗಿ ವೇಷಧರಿಸಿ, ಕಾಲ ಕಳೆದು ಮಹಾಭಾರತ ಯುದ್ಧನಂತರ ಆ ದೇಶಕ್ಕೆ ಅಧಿಪತಿಯಾದ ಕಥೆಯೇ ಭಾರತ, ಆದಿನಾರಾಯಣನು ಭೂಮಿಯಲ್ಲಿ ಜನಿಸಿ ರಾಮನೆನ್ನುವ ಹೆಸರನ್ನು ಧರಿಸಿ, ಜನ ಮೆಚ್ಚುವಂತೆ ರಾಜ್ಯಭಾರ ಮಾಡಿ ರಾಕ್ಷಸ ರಾವಣನನ್ನು ಸಂಹಾರ ಮಾಡಿ ಅವನ ಗರ್ವವನ್ನು ಅಳಿಸಿದ ಕಥೆಯೇ ರಾಮಾಯಣ. ದುರ್ಯೋಧನ, ರಾವಣರು ಉದ್ದಟರಾಗಿ ವರ್ತಿಸಿ ಕಾಲಾಂತರದಲ್ಲಿ ನಾಶವನ್ನು ಹೊಂದಿದರು. ಚಾಮರಸ ಹೇಳುವಂತೆ 'ರಾಮಾಯಣ-ಮಹಾಭಾರತ 'ಕಾಳಗದ ಕಥೆಗಳು' ಎನ್ನುವ ಮಾತನ್ನು ಸಿದ್ಧರಾಮನ ಲೌಕಿಕ ಚಿಂತನೆಯ ಹಿನ್ನಲೆಯಲ್ಲಿ ಗಮನಿಸಬಹುದು.





ಕೆಳವರ್ಗದವರಿಗೆ ಪ್ರವೇಶವಿಲ್ಲದ ದೇವಾಲಯ ಗಳನ್ನೇ ತಿರಸ್ಕರಿಸುವ ಮನೋಭಾವವನ್ನು ರೂಢಿಸಿ ಕೊಂಡವರು ಶರಣರು. ವೇದಗಳು ದಲಿತರನ್ನು ತಿರಸ್ಕರಿಸಿ ದರೆ, ವಚನಕಾರರು ವೇದಗಳನ್ನೇ ತಿರಸ್ಕರಿಸುವ ಐತಿಹಾಸಿಕ ಘಟನೆಗೆ ಸಾಕ್ಷಿಯಾದುದು ಶರಣರಿಗೆ ಕೆಳವರ್ಗದವರ ಬಗೆಗಿನ ಪ್ರೀತಿ, ಕಾಳಜಿಯನ್ನು ಸೂಚಿಸುತ್ತದೆ. ಶರಣ ಆದಯ್ಯ ತನ್ನ ವಚನದಲ್ಲಿ ವೇದಶಾಸ್ತ್ರಗಳ ಬಗ್ಗೆ ತನ್ನದೇ ಆದ ರೀತಿಯಲ್ಲಿ ವಿರೋಧವನ್ನು ವ್ಯಕ್ತಪಡಿಸಿದ್ದಾನೆ.

*ವೇದಂಗಳು ಹಿಂದೆ ಹರಿಯದಿರು, ಹರಿಯದಿರು*
*ಶಾಸ್ತ್ರಂಗಳ ಹಿಂದೆ ಸುಳಿಯದಿರು, ಸುಳಿಯದಿರು*
*ಪುರಾಣಂಗಳ ಹಿಂದೆ ಬಳಸದಿರು, ಬಳಸದಿರು*
*ಆಗಮಂಗಳ ಹಿಂದೆ ತೊಳಲದಿರು, ತೊಳಲದಿರು*
*ಸೌರಾಷ್ಟ್ರ ಸೋಮೇಶ್ವರನ ಕೈವಿಡಿದು*
*ಶಬ್ದಜಾಲಂಗಳಿಗೆ ಬಳಲದಿರು, ಬಳಲದಿರು.*

ಆದಯ್ಯನ ಈ ಮಾತುಗಳು ಹನ್ನೆರಡನೆ ಶತಮಾನದಲ್ಲಿದ್ದ ಶೋಷಿತ ವರ್ಗದವರ ಧ್ವನಿಯಾಗಿದೆ. ಬ್ರಾಹ್ಮಣ ಒಂದು ಜಾತಿಯಲ್ಲ, ವೇದ,ಶಾಸ್ತ್ರ, ಪುರಾಣಗಳನ್ನು ಕರಗತ ಮಾಡಿಕೊಂಡಾಕ್ಷಣ ಬ್ರಾಹ್ಮಣರು ಶ್ರೇಷ್ಠರಾಗುವುದಿಲ್ಲ. ತಮ್ಮ ನಡೆ, ನುಡಿ, ಆದರ್ಶ ಮೌಲ್ಯಗಳನ್ನು ಅಳವಡಿಸಿಕೊಂಡು ಶ್ರೇಷ್ಠರಾಗಬೇಕೆಂಬುದು ವಚನಕಾರರ ನಿಲುವಾಗಿತ್ತು.

ಮಡಿವಾಳ ಮಾಚಯ್ಯ ಒಬ್ಬ ಅಪ್ರತಿಮ ವಿಚಾರವಾದಿ, ಚಿಂತನಶೀಲ, ತನಗನಿಸಿದ್ದನ್ನು ನಿರ್ಭಯವಾಗಿ ಹೇಳುವ ಎದೆಗಾರಿಕೆಯುಳ್ಳವನು. ಸ್ವಾಭಿಮಾನಿ, ಅನ್ಯಾಯದ ವಿರುದ್ಧ ಪ್ರತಿಭಟಿಸುವ ಅಪ್ರತಿಮ ಹೋರಾಟಗಾರ, ಯಾವುದು ಸತ್ಯವೋ ಅದನ್ನು ಅನುಸರಿಸಿದವನು. ಯಾವುದು ತನ್ನ ಅನುಭವದ ವ್ಯಾಪ್ತಿಯಲ್ಲಿ ಬರುತ್ತದೆಯೋ ಅದನ್ನು ಆಚರಿಸಿದವನು. ಈ ದೃಷ್ಟಿಯಿಂದ ಅವನ ಚಿಂತನೆಗಳು, ವಿಚಾರಗಳು ಮೌಲಿಕವಾದವುಗಳು. ವೇದ, ಪುರಾಣ, ಶಾಸ್ತಗಳ ಬಗ್ಗೆ ಅವರ ಅಭಿಪ್ರಾಯಗಳು ಗಮನಾರ್ಹವಾಗಿವೆ.

*ವೇದ ವಿಪ್ರರ ಬೋಧೆ-ಶಾಸ್ತ್ರ ಸಂತೆಯ ಮಾತು*
*ಪುರಾಣ ಪುಂಡರ ಗೋಷ್ಠಿ, ಆಗಮ ಅಸತ್ಯದ ನುಡಿ,*
*ತರ್ಕ ವ್ಯಾಕರಣ ಕವಿತ್ವದ ಪ್ರೌಢಿಮೆ, ಇದು ಕಾರಣ*
*ತನ್ನೊಳಗರಿದ ಅನುಭಾವದಿಂದ*
*ಘನವಲ್ಲಿಂದ ಕಲಿದೇವರ ದೇವಾ.*

ಸಂತೆಯ ಮಾತು, ಪುಂಡರಗೋಷ್ಠಿ, ಅಸತ್ಯದ ನುಡಿ, ಈ ಮಾತುಗಳು ವೇದ, ಶಾಸ್ತ್ರ, ಆಗಮಗಳು ಅರ್ಥಹೀನ ಎಂಬುದನ್ನು ಸ್ಪಷ್ಟವಾಗಿ ಹೇಳಿದ್ದಾನೆ.

ಅನುಭಾವಿ ಅಲ್ಲಮ ಪ್ರಭು ಮಾತನ್ನು ಜ್ಯೋತಿಯಾಗಿಸಿದವನು. ಅವನಾಡಿದ ಒಂದೊಂದು ಶಬ್ದಗಳೂ ದಿಗಂತದಷ್ಟೇ ವಿಶಾಲ. ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದಂತೆಲ್ಲಾ ಅದು ವಿಸ್ತಾರವಾಗುತ್ತಾ ಹೋಗುವುದನ್ನು ಅವನ ವಚನಗಳಲ್ಲಿ ಕಾಣಬಹುದು. ವೇದ ಶಾಸ್ತ್ರ ಪುರಾಣಗಳನ್ನು ಕುರಿತು ತನ್ನದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ.

*ವೇದವೆಂಬುದು ಓದಿನ ಮಾತು*
*ಶಾಸ್ತ್ರವೆಂಬುದು ಸಂತೆಯ ಸುದ್ದಿ*
*ಪುರಾಣವೆಂಬುದು ಪುಂಡರ ಗೋಷ್ಠಿ*
*ತರ್ಕವೆಂಬುದು ತಗರ ಹೋರಟೆ*
*ಭಕ್ತಿ ಎಂಬುದು ತೋರಿ ಉಂಬ ಲಾಭ*
*ಗುಹೇಶ್ವರನೆಂಬುದು ಮೀರಿದ ಘನವು.*

ಮಡಿವಾಳ ಮಾಚಯ್ಯ ಬಳಸಿರುವ ಶಬ್ದ ಅಲ್ಲಮ ಪ್ರಭು ಬಳಸಿರುವ ಶಬ್ದವೂ ಒಂದೇ ರೀತಿಯಲ್ಲಿರುವುದು ಕಂಡು ಬರುತ್ತದೆ. ಮಡಿವಾಳ ಮಾಚಯ್ಯ ಶಾಸ್ತ್ರವನ್ನು ಸಂತೆಯ ಮಾತು ಎಂದು ಹೇಳಿದರೆ. ಅಲ್ಲಮಪ್ರಭು ಸಂತೆಯ ಸುದ್ದಿ ಎಂದು ಹೇಳಿದ್ದಾರೆ. ಪುರಾಣವನ್ನು ಪುಂಡರ ಗೋಷ್ಠಿ ಎಂದು ಮಡಿವಾಳ ಮಾಚಯ್ಯ, ಅಲ್ಲಮ ಪ್ರಭು ಇಬ್ಬರೂ ಹೇಳಿದ್ದಾರೆ. ಇಲ್ಲಿ ಯಾರ ಪ್ರಭಾವ ಯಾರ ಮೇಲಾಗಿದೆ ಎಂದು ಹೇಳವುದು ಕಷ್ಟ. ಇಬ್ಬರೂ ಸಮಕಾಲೀನರು. ಇಬ್ಬರೂ ಪ್ರತಿಭಾವಂತರು. ಇಬ್ಬರೂ ಸಮಾನ ಮನಸ್ಕರಾಗಿದ್ದರಿಂದ ಅವರಿಬ್ಬರ ಅಭಿಪ್ರಾಯ ಒಂದೇ ಆಗಿರಬಹುದೆಂದು ಊಹಿಸಬಹುದಾಗಿದೆ.

ಬಸವಣ್ಣನವರೂ ವೇದ, ಶಾಸ್ತ್ರ ಆಗಮವನ್ನು ತಮ್ಮದೇ ಆದ ರೀತಿಯಲ್ಲಿ ಖಂಡಿಸಿದ್ದಾರೆ;

*ವೇದಕ್ಕೆ ಬರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ*
*ತರ್ಕದ ಬೆನ್ನ ಬಾರನ್ನೆತ್ತುವೆ*
*ಆಗಮದ ಮೂಗಕೊಯ್ಯುವೆ ನೋಡಯ್ಯಾ*

*ಮಹಾದಾನಿ ಕೂಡಲಸಂಗಮದೇವಾ*
*ಮಾದರ ಚೆನ್ನಯ್ಯನ ಮನೆಯ ಮಗ ನಾನಯ್ಯ.*

ಮಹಾಕವಿ ಕುವೆಂಪು ಒಂದು ಕಡೆ "ಋಷಿಗಳೂ ಕೂಡ ನಮ್ಮಂತೆ ಮಾನವರೆ ಅವರ ಶಾಸ್ತ್ರವು ಅವರ ಕಾಲಕ್ಕೆ ಮಾತ್ರ" ಎಂಬ ಮಾತನ್ನು ಇಲ್ಲಿ ಗಮನಿಸಬಹುದು. ಡಾ.ಬಿ.ಆರ್. ಅಂಬೇಡ್ಕರ್ ಅವರು ಸಾಮಾಜಿಕ ಸಮಸ್ಯೆಗಳ ವಿರುದ್ಧ ಹೋರಾಟ ನಡೆಸಲು ಮುಂದಾದಾಗ ಯಾವುದು ಮಾನವೀಯ ಮೌಲ್ಯಗಳ ನಡುವೆ ಕಂದಕವನ್ನು ನಿರ್ಮಿಸಿತೋ, ಯಾವುದು ವರ್ಣವ್ಯವಸ್ಥೆ ಲಿಂಗವ್ಯವಸ್ಥೆ ಯನ್ನು ಗಟ್ಟಿಗೊಳಿಸುವ 'ಮನುಸ್ಮೃತಿ'ಯನ್ನು ಸುಟ್ಟು ಹಾಕುವುದರ ಮೂಲಕ ಪ್ರತಿಭಟಿಸಿದರು. ಅಸಮಾನತೆಯನ್ನು ನಿರಂತರವಾಗಿ ಕಾಲ ಪ್ರವಾಹದಲ್ಲಿಯೂ ಉಳಿಸಿಕೊಂಡು ಹೋಗಲು ಹೊಂಚುಹಾಕುತ್ತಿರುವ ಮನುಸ್ಮೃತಿಯನ್ನು ವಿರೋಧಿಸದೆ ಸಾಮಾಜಿಕ ಪ್ರತಿಭಟನೆ ಸಾಧ್ಯವಿಲ್ಲವೆಂದು ಅಂಬೇಡ್ಕರ್ ಚೆನ್ನಾಗಿ ಅರ್ಥಮಾಡಿಕೊಂಡಿದ್ದರು. ತಮ್ಮ ಭಾವನೆಗಳನ್ನು ಸಾಕಾರಗೊಳಿಸಲು ಮನುಸ್ಮೃತಿಯನ್ನು ಸುಟ್ಟ ನಂತರ ಸಾವಿರಾರು ಜನರೊಂದಿಗೆ 'ಮಹಾಡ್' ಕೆರೆಯ ನೀರು ಕುಡಿದದ್ದು, ದೇವಾಲಯ ಪ್ರವೇಶ ಮೊದಲಾದ ಚಳುವಳಿ ನಡೆದುದು ಈಗ ಇತಿಹಾಸ. ಭಾರತೀಯ ಸಂಸ್ಕೃತಿಯಲ್ಲಿ ಸಾಮಾಜಿಕ ಬದುಕಿನಲ್ಲಿ ಅಸಮಾನತೆಯ ಬೀಜ ಬಿತ್ತಿದ ವರ್ಣ, ಜಾತಿ, ಲಿಂಗ, ವರ್ಗಗಳ ವ್ಯತ್ಯಾಸಕ್ಕೆ ವೈದಿಕ ಧರ್ಮವೇ ಮೂಲ ಕಾರಣವಾದುದರಿಂದ ಅದರ ವಿರುದ್ಧ ಬಂಡೇಳದ ಹೊರತು ಸಮಾಜದಲ್ಲಿ ಸಾಮರಸ್ಯದ ವಾತಾವರಣವನ್ನುಂಟು ಮಾಡಲು ಸಾಧ್ಯವಿಲ್ಲವೆಂದು ಬಸವಾದಿ ಶರಣರು ಅರಿತಿದ್ದುದರಿಂದಲೇ ವರ್ಣವ್ಯವಸ್ಥೆ, ಕರ್ಮ ಸಿದ್ಧಾಂತ, ಯಜ್ಞ, ವೇದಾಗಮ, ಶಾಸ್ತ್ರ, ಆಗಮ, ಪುರಾಣಗಳನ್ನು ಖಂಡಿಸಬೇಕಾದ ಅನಿವಾರ್ಯತೆ ಉಂಟಾಯಿತು.

ಶರಣ ಉರಿಲಿಂಗಪಿದ್ದಿ ಕೆಳವರ್ಗದಿಂದ ಬಂದ ವಚನಕಾರ. ತನಗನಿಸಿದ್ದನ್ನು ನಿರ್ಭಯವಾಗಿ ಹೇಳುವ ಎದೆಗಾರಿಕೆ. ಅವನು ವೇದಶಾಸ್ತ್ರ ಪುರಾಣಗಳೆಲ್ಲ ಜೊಳ್ಳು ಎಂಬುದನ್ನು ತನ್ನ ವಚನದ ಮೂಲಕ ಅಭಿವ್ಯಕ್ತಿಪಡಿಸಿದ್ದಾನೆ.

*ವೇದಶಾಸ್ತ್ರ ಪುರಾಣಾಗಮ ಗ್ರಂಥಗಳ*
*ನೋಡಿದವರೆಲ್ಲರೇನು ಹಿರಿಯರೆಂಬೆನೆ*
*ಅಲ್ಲಲ್ಲ ನಿಲ್ಲು ಮಾಣು*
*ಅವರೇ ಹಿರಿಯರಾದರೆ ನಟ್ಟುವ, ಗಳೆಯಾಡಿ*
*ಮಿಣಿಯಾಟ, ಅದೃಶ್ಯಕರಣ, ಅಗ್ನಿಸ್ತಂಭ, ಆಕರ್ಷಣ*
*ಚಾಪಿಷ್ಟ ಕಲಾವಿದ್ಯೆಯ ಸಾಧಿಸಿದ ಡೊಂಬನೇನು*
*ಕಿರಿಯನೆ, ?*
*ಇದು ಉದರಪೋಷಣ ವಿದ್ಯೆ ಎನಿಸುವುದು*
*ಅವರನೆಂತು ಸರಿ ಎಂಬೆನಯ್ಯ, ಲಿಂಗವಂತಂಗೆ!*

ತುಂಬಾ ಮಾರ್ಮಿಕವಾಗಿ ಹೋಲಿಕೆಯೊಂದಿಗೆ ವೇದಶಾಸ್ತ್ರ ಬಲ್ಲವರೆಲ್ಲರೂ ಹಿರಿಯರು ಎಂದು ಹೇಳಲಾಗದು ಎಂಬುದನ್ನು ಸೂಚ್ಯವಾಗಿ ಪ್ರತಿಪಾದಿಸಿದ್ದಾನೆ. ಅವನು ಎತ್ತಿರುವ ಪ್ರಶ್ನೆಗಳು ನಮ್ಮನ್ನು ಚಿಂತನೆಗೆ ಒಳಗು ಮಾಡುತ್ತದೆ. ವೇದಶಾಸ್ತ್ರ, ಪುರಾಣ, ಆಗಮಗಳನ್ನು ಓದಿಕೊಂಡವರೆಲ್ಲ ಹಿರಿಯರು, ಪಂಡಿತರೆಂದು ಕರೆಯುವುದಾದರೆ, ಚರ್ಮವಾದ್ಯವನ್ನು ಬಾರಿಸುತ್ತಾ ಕುಣಿಯುವ, ತಂತಿಯ ಮೇಲೆ ನಡೆಯುವ, ವಶೀಕರಣ ವಿದ್ಯೆಯನ್ನು ಪ್ರದರ್ಶಿಸುವ, ಮೋಡಿ ಆಟ ಆಡಿ ಜನರನ್ನು ರಂಜಿಸುವ, ಅಗ್ನಿ ಸ್ತಂಭದ ಕಲೆಯನ್ನು ಪ್ರದರ್ಶಿಸುವ, ದೊಂಬರಾಟವನ್ನು ಆಡುವ ಕಲಾವಿದರನ್ನು ಕಿರಿಯರೆಂದು ಹೇಳಬಹುದೆ ಎಂದು ಪ್ರಶ್ನಿಸುವುದರ ಮೂಲಕ ವೇದ ಶಾಸ್ತ್ರ ಪುರಾಣಗಳನ್ನು ಬಲ್ಲವರೆಲ್ಲ ಹಿರಿಯರಲ್ಲ ಎಂಬುದನ್ನು ಪ್ರತಿಪಾದಿಸಿದ್ದಾನೆ. ಉರಿಲಿಂಗ ಪೆದ್ದಿಯ ಈ ವಚನಕ್ಕೆ ಪೂರಕವಾಗಿ ಜೇಡರ ದಾಸಿಮಯ್ಯನ ವಚನವನ್ನು ಉಲ್ಲೇಖಿಸಬಹುದು;

*ಮಡದಿಯ ಪ್ರಾಣಕ್ಕೆ ಮೊಲೆ ಮುಡಿ ಇದ್ದಿತ್ತೆ ?*
*ಒಡೆಯನ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ ?*
*ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೆ ಹಿಡಿಗೋಲ?*
*ನೀ ತೊಡಕಕ್ಕಿದ ತೊಡಕನೀ ಲೋಕದ*
*ಜಡರೆತ್ತಬಲ್ಲರೈ ರಾಮನಾಥ ?*

ಚನ್ನಬಸವಣ್ಣ ವೇದಶಾಸ್ತ್ರ, ಆಗಮ ಪುರಾಣಗಳ ಬಗ್ಗೆ ತನ್ನದೇ ಅದ ಅಭಿಪ್ರಾಯವನ್ನು ವಚನದ ಮೂಲಕ ಅಭಿವ್ಯಕ್ತಿಪಡಿಸಿದ್ದಾನೆ.

*ವೇದಘನವೆಂಬೆನೆ ! ವೇದ ವೇಧಿಸಲರಿಯದೆ*
*ಕೆಟ್ಟವು ಶಾಸ್ತ್ರ ಘನವೆಂಬನೆ ! ಶಾಸ್ತ್ರ*





*ಸಾಧಿಸಲರಿಯದೆ ಕೆಟ್ಟವು*

ಎಂಬ ಮಾತುಗಳಾಗಲಿ, ಅಂಬಿಗರ ಚೌಡಯ್ಯನ

*ನಾದದ ಬಲದಿಂದ ವೇದಂಗಾದುದಲ್ಲದೆ, ವೇದ*
*ಸ್ವಯಂಭುವಲ್ಲ;ಮಾತಿನ ಬಲದಿಂದ*
*ಶಾಸ್ತ್ರಂಗಳಾದುದಲ್ಲದೆ, ಶಾಸ್ತ್ರ ಸ್ವಯಂಭುವಲ್ಲ.*

ವಚನವೂ ಕೂಡ ವೇದಪುರಾಣಗಳ ಬಗೆಗಿನ ಅಭಿಪ್ರಾಯವನ್ನು ಇಲ್ಲಿ ಗಮನಿಸಬಹುದಾಗಿದೆ.

ಶರಣರು ಮಹಾಮೇಧಾವಿಗಳಾಗಿದ್ದರು. ಅಲ್ಲದೆ ಅವರು ಸಂಪೂರ್ಣ ಸ್ವಾನುಭವಿಗಳಾಗಿದ್ದರು. ಅವರು ತಮ್ಮ ಸಾಧನೆಯಿಂದ ಆಧ್ಯಾತ್ಮಾನುಭವದ ಶಿಖರಗಳನ್ನು ಮುಟ್ಟಿದವರಾಗಿದ್ದರಿಂದ ಶಾಸ್ತ್ರಾಚರಣೆಗಳ ಕರ್ಮಕಾಂಡವನ್ನು ಅದನ್ನು ಬೆಂಬಲಿಸುವ ಸರ್ವರನ್ನು ಲಘುವಾಗಿ ನೋಡಿ ತಿರಸ್ಕರಿಸಬಲ್ಲವರಾಗಿದ್ದರು. ಅವರು ಸರ್ವರಲ್ಲಿಯೂ ಸಮಾನತೆಯನ್ನು ಕಾಣಬೇಕೆನ್ನುವ ಆಶಯವನ್ನು ಹೊಂದಿದ್ದರು. ಯಾವುದೇ ರೀತಿಯಲ್ಲಿ ವರ್ಗ ವರ್ಗಗಳ ನಡುವಿನ ತಾರತಮ್ಯವನ್ನು ಸಹಿಸುತ್ತಿರಲಿಲ್ಲ. ಯಾರು ಯಾರಿಗೂ ಹೆಚ್ಚಲ್ಲ, ಕಡಿಮೆಯಲ್ಲ, ಎಂಬ ಸಮಾನತಾ ಸಿದ್ಧಾಂತವನ್ನು ಸ್ವಾನುಭವ ಮಾಡಿಕೊಂಡು ತೋರಿಸಿದವರು. ವಚನಕಾರರು ವೇದಶಾಸ್ತ್ರಗಳು ಆಗಮ, ಪುರಾಣಗಳ ಹೆಸರಿನಲ್ಲಿ ಪುರೋಹಿತಶಾಹಿಗಳು ಹೆಣೆದಿದ್ದ ಬಲೆಯನ್ನು ಅರಿವಿನ ಜ್ಯೋತಿಯ ಮೂಲಕ ಸುಟ್ಟುಹಾಕಿದರು.

ವಚನಕಾರರಲ್ಲಿ ಬಹಳಷ್ಟು ಮಂದಿ ಕೆಳಸ್ಥರದಿಂದ ಬಂದವರು. ಹಾಗಾಗಿ ಅವರು ಹೆಚ್ಚಿನ ಶಿಕ್ಷಣವನ್ನು ಪಡೆಯಲು ಸಾಧ್ಯವಾಗಲಿಲ್ಲ. ಆಗ ಅಂತಹ ಸೂಕ್ತ ವಾತಾವಣವೂ ಇರಲಿಲ್ಲ. ಆದರೆ ಅವರು ಪ್ರತಿಭಾ ಸಂಪನ್ನರಾಗಿದ್ದರು. ತಮ್ಮ ದಿನನಿತ್ಯದ ಅನುಭವ, ಅನುಭಾವಗಳನ್ನು ಸರಳವಾಗಿ ಜನರಿಗೆ ತಿಳಿಯುವಂತೆ ಮಾಡಿದರು. ಅವರು ರಚಿಸಿದ ವಚನಗಳು ಜನರಲ್ಲಿ ಅರಿವಿನ ಹೊಸ ಸಂಚಲನವನ್ನೇ ಉಂಟು ಮಾಡಿತು. ವಿದ್ಯೆಯೆಂಬುದು ಸಾಮಾಜಿಕ ನೆಲೆಯಲ್ಲಿ ಗೌರವದ ಸಂಕೇತವಾಗಿದ್ದರೂ ಅವರು ಎದೆಗುಂದಲಿಲ್ಲ. ಅದನ್ನು ಸವಾಲಾಗಿ ಸ್ವೀಕರಿಸಿದರು. ಅವರಲ್ಲಿನ ಆತ್ಮವಿಶ್ವಾಸ ತಮ್ಮ ಅನುಭವ ಅನುಭಾವಗಳಿಗೆ ಮಾತಿನ ರೂಪ ತೋರಿತು. ಪುಸ್ತಕ ವಿದ್ಯೆಯಿಂದ ವಂಚಿತರಾದರೂ ಅವರ ಬದುಕು ಕಲಿಸಿಕೊಡುವ ವಿದ್ಯೆಯಿಂದ ವಂಚಿತರಾಗಲಿಲ್ಲ. ಹೀಗಾಗಿ ಅವರ ಬದುಕು ಸಂಪನ್ನವಾಯಿತು. ತಾವು ಕಂಡ ಶಾಶ್ವತ ಜೀವನ ಮೌಲ್ಯಗಳನ್ನು ಬೇರೆಯವರಿಗೂ ತಮ್ಮ ವಚನಗಳ ಮೂಲಕ ಅರಿವಿನ ಜ್ಯೋತಿ ಬೆಳಗುವಂತೆ ಮಾಡಿದರು. ಬಸವಣ್ಣನವರು ಹೇಳಿದಂತೆ "ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು' ಎಂಬ ಮಾತು ವಚನಗಳ ಮಹತ್ವವನ್ನು ತಿಳಿಸುತ್ತದೆ. 'ಪುಸ್ತಕ ವಿದ್ಯೆಯೆ ವಿದ್ಯೆ' ಎಂದು ಭಾವಿಸಿದವರ ಭಾವನೆ ಹುಸಿ ಎಂಬುದನ್ನು ಬಸವಣ್ಣನವರು ಈ ಕೆಳಗಿನ ವಚನದಲ್ಲಿ ಸ್ಪಷ್ಟಪಡಿಸಿದ್ದಾರೆ.

*ಹಾಲತೊರೆಗೆ ಬೆಲ್ಲದ ಕೆಸರು ಸಕ್ಕರೆಯ ಮಳಲು*
*ತವರಾಜದ ನೊರೆ ತೆರೆಯಂತೆ ಆದ್ಯರ*
*ವಚನವಿರಲು ಬೇರೆ ಬಾವಿಯ ತೋಡಿ*
*ಉಪ್ಪನೀರನುಂಬುವನ ವಿಧಿಯಂತೆ*
*ಆಯಿತ್ತೆನ್ನ ಮತಿ ಕೂಡಲಸಂಗಮದೇವ.*

ಇಲ್ಲಿಯ ಒಂದೊಂದು ನುಡಿಯೂ ಮಸ್ತಕ ವಿದ್ಯೆ ವಿದ್ಯೆಯಲ್ಲ ಎಂಬುದನ್ನು ಪ್ರಮಾಣೀಕರಿಸುತ್ತದೆ.

ಒಟ್ಟಿನಲ್ಲಿ ಸಿದ್ಧರಾಮನ ಒಟ್ಟಾರೆ ವಚನಗಳನ್ನು ಕುರಿತು ಹೇಳವುದಾದರೆ "ಸಿದ್ಧರಾಮನ ವಚನಗಳಲ್ಲಿ ಎಲ್ಲಿಯೂ ಏರುದನಿಯಿಲ್ಲ. ಸಾಮಾಜಿಕ ಅಸಾಂಗತ್ಯಗಳನ್ನು ಕಟುವಾಗಿ ಟೀಕಿಸುವುದಿಲ್ಲ ಅಥವಾ ತಾವೊಬ್ಬ ಮಾರ್ಗದರ್ಶಕ ಗುರು ಎಂಬ ಗತ್ತಿನಿಂದಲೂ ಮಾತನಾಡುವುದಿಲ್ಲ. ಅದರ ಬದಲು ಜಗದ ಕಲ್ಯಾಣದೊಳಗೆ ಆತ್ಮಕಲ್ಯಾಣವನ್ನು ಸಾಧಿಸಿಕೊಳ್ಳುವ ಒಂದು ಪರಿಣತ ಮನಸ್ಸಿನ ಮತ್ತು ಲೋಕದ ಬಗ್ಗೆ ಅಪಾರವಾದ ಅನುಕಂಪ ತುಂಬಿದ ದನಿಯೊಂದು ಅವನ ವಚನಗಳಲ್ಲಿ ಅನುರಣಗೊಳ್ಳುತ್ತದೆ. ಬೇರೆಯಾಗಿ ಹೇಳಬೇಕಾದ ಮಾತೆಂದರೆ ಕಲ್ಯಾಣದ ಬಸವಾದಿ ಶರಣರಂತೆ ಅವನು ಸಾಮಾಜಿಕ–ಧಾರ್ಮಿಕ ಆಂದೋಲನದ ತುರ್ತು ಹಾಗೂ ಸಂಘರ್ಷಗಳ ನಡುವೆ ಬದುಕಿದವನಲ್ಲ. ಅವನ ಬದುಕಿನ ಬಹುಭಾಗ ಸೊನ್ನಲಿಗೆಯ ದೇವಸ್ಥಾನ ಕೇಂದ್ರಿತ ಕ್ಷೇತ್ರಕಾರ್ಯಗಳ ನಡುವೆ, ಭಕ್ತಿಯಿಂದ ಅರ್ತತೆಯಿಂದ ತನ್ನ ಬಳಿಗೆ ಬರುವ ಸಾಮಾನ್ಯ ಜನರ ಕಷ್ಟ–ಕಾರ್ಪಣ್ಯಗಳ ನಡುವೆ, ದೈನಂದಿನ

ಪೂಜೆ-ಪ್ರಾರ್ಥನೆ ನೇಮ ಧ್ಯಾನಾದಿಗಳ ನಡುವೆ ಕ್ರಿಯಾಶೀಲವಾಗಿತ್ತು. ಹೀಗೆ ಬಹುಜನ ಹಿತಕಾರಿಯಾದ ಕಾರ್ಯಭಾರಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತ ತನ್ನ ಮನಸ್ಸಿನ ಪ್ರಸನ್ನತೆಯನ್ನು ಒಂದೇ ಹದದಲ್ಲಿ ಉಳಿಸಿಕೊಳ್ಳುತ್ತಾ, 'ಆರೇನಂದರೂ ಓರಂತಿಪ್ಪುದೇ ಸಮತೆ' ಎಂದು ಬದುಕಿದ ಶಿವಯೋಗಿ ಸಿದ್ಧರಾಮನು ಕನ್ನಡ ನಾಡು ಕಂಡ ಅಪರೂಪದ ಶಿವಯೋಗಿಯೂ, ವಚನಕಾರನೂ ಆಗಿದ್ದಾನೆ" ಎಂದು ಸಿದ್ಧರಾಮನನ್ನು ಕುರಿತು ರಾಷ್ಟ್ರಕವಿ ಡಾ.ಜಿಎಸ್. ಶಿವರುದ್ರಪ್ಪನವರು ಹೇಳಿರುವ ಮಾತುಗಳು ಸಿದ್ಧರಾಮನ ಘನ ವ್ಯಕ್ತಿತ್ವಕ್ಕೆ ಹೊನ್ನಕಳಸವಿಟ್ಟಂತಾಗಿದೆ.

**ಗ್ರಂಥ ಋಣ:**


1. ಡಾ.ಜಿ.ಎಸ್. ಶಿವರುದ್ರಪ್ಪ; ಶಿವಯೋಗಿ ಸಿದ್ಧರಾಮ ಪ್ರ. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು (1997)
2. ಅನುಭಾವಪಥ : ಪ್ರಧಾನ ಸಂಪಾದಕರು: ಡಾ.ಜಿ.ಎಸ್. ಶಿವರುದ್ರಪ್ಪ, ಪ್ರ. ಉದ್ವಾನಶ್ರೀ ಪ್ರಕಾಶನ, ಶ್ರೀ ಸಿದ್ಧಗಂಗಾ ಮಠ. ತುಮಕೂರು ಜಿಲ್ಲೆ(2010)
3. ವಚನ ಚಿಂತನ : (ಸಂ) ಗೊ.ರು. ಚನ್ನಬಸಪ್ಪ, ಪ್ರ. ಶ್ರೀ ಸರ್ಪಭೂಷಣ ಶಿವಯೋಗಿಗಳ ಮಠ, ಬೆಂಗಳೂರು (1992)
4. ಸಿದ್ಧರಾಮೇಶ್ವರ ವಚನ ಸಂಪುಟ-4; (ಸಂ) ಎಸ್. ವಿದ್ಯಾಶಂಕರ, ಪ್ರ. ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು (2001)
5. ವಚನ : (ಸಂ): ಡಾ.ಎಂ.ಎಂ. ಕಲಬುರ್ಗಿ, ಪ್ರ. ಬಸವ ಸಮಿತಿ, ಬೆಂಗಳೂರು (2012)
6. ತವನಿಧಿ: (ಸಂ). ಡಾ.ಸಿ. ವೀರಣ್ಣ, ಪ್ರ. ಗೊ.ರು.ಚ ಅಭಿನಂದನಾ ಸಮಿತಿ, ಬೆಂಗಳೂರು (2014) ✪


### 'ಸಿದ್ಧಗಂಗಾ' ಮಾಸಪತ್ರಿಕೆ ಚಂದಾದಾರರಲ್ಲಿ ಮನವಿ

೨೦೧೪ರ ನಿಮ್ಮ ವಾರ್ಷಿಕ ಚಂದಾ ಅವಧಿ ಮುಗಿದಿರುವ ಸದಸ್ಯರುಗಳು ೨೦೧೫ನೇ ಸಾಲಿಗೆ ನವೀಕರಿಸಿಕೊಳ್ಳಬೇಕಾಗಿ ವಿನಂತಿ.

ನಿಮ್ಮ ವಿಳಾಸ ಬದಲಾವಣೆ ಆದ ಕೂಡಲೆ ಹೊಸ ವಿಳಾಸವನ್ನು ಚಂದಾ ನಂಬರ್ ತಪ್ಪದೇ ಸೂಚಿಸಿ ಈ ಕೆಳಕಂಡ ವಿಳಾಸಕ್ಕೆ ಪತ್ರ ಮೂಲಕ ತಿಳಿಸಬೇಕಾಗಿ ನಮ್ರ ವಿನಂತಿ.

ವಾರ್ಷಿಕ ಚಂದ ರೂ. ೨೦೦/- ಆಜೀವ ಚಂದಾ ರೂ. ೧೫೦೦/- 'ಸಿದ್ಧಗಂಗಾ' ನಿಮ್ಮ ಮನೆ ನಿರಂತರ ವಾಗಿ ಬೆಳಗಲು ಆಜೀವ ಸದಸ್ಯತ್ವ ಪಡೆಯಿರಿ. ಚಂದಾ ಹಣವನ್ನು ಈ ವಿಳಾಸಕ್ಕೆ ಕಳುಹಿಸಿರಿ.

ಪ್ರಕಾಶಕರು, 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂ: 0816-2282322

### ಸಿದ್ಧಗಂಗಾ ಮಾಸಪತ್ರಿಕೆ ಚಂದಾದಾರರ ಗಮನಕ್ಕೆ

ಚಂದಾದಾರರ ಸರಿಯಾದ ವಿಳಾಸವಿಲ್ಲದೆ ಪತ್ರಿಕೆಗಳು ನಮ್ಮ ಕಾರ್ಯಾಲಯಕ್ಕೆ ಹಿಂದಕ್ಕೆ ಬರುತ್ತಿವೆ. ತಾವು ದಯವಿಟ್ಟು ವಿಳಾಸ ಬದಲಾವಣೆಯಾದಲ್ಲಿ ಚಂದಾದಾರರ ಸಂಖ್ಯೆ ಹಾಗೂ ಅಂಚೆ ಪಿನ್‌ಕೋಡ್ ಇರುವ ಸರಿಯಾದ ವಿಳಾಸದ ಜೊತೆಗೆ ಮೊಬೈಲ್ ಫೋನ್‌ಸಂಖ್ಯೆ ಸಹ ಪತ್ರಿಕೆ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ. -ಪ್ರಕಾಶಕರು

### ಶ್ರೀವಾಣಿ

ಮಾನವನು ವಿಶ್ವದ ಅತ್ಯಂತ ಶ್ರೇಷ್ಠ ಜೀವಿ. ಅವನ ಚರಮಗುರಿ ಸತ್ಯಸಾಕ್ಷಾತ್ಕಾರ. ಅಂತೆಯೇ ಚಿರಕಾಲದಿಂದಲೂ ಸತ್ಯಾನ್ವೇಷಣೆಯ ಪ್ರಯತ್ನ ನಡೆದಿದೆ. ತಮ್ಮ ಪ್ರಯತ್ನದಲ್ಲಿ ಜಯಶೀಲರಾಗಿ ಸಿದ್ಧಿಯನ್ನು ಪಡೆದ ಮಹಾವ್ಯಕ್ತಿಗಳು ತಮ್ಮ ಸಾಕ್ಷಾತ್ಕಾರದ ನಿಲುವನ್ನು, ತಮ್ಮ ಅನುಭವದ ಅರಿವನ್ನು ಸಾಧನೆಯ ಮಾರ್ಗವನ್ನು ಮಾನವ ಜನಾಂಗದ ಉದ್ಧಾರಕ್ಕಾಗಿ ಬಿಟ್ಟು ಹೋಗಿದ್ದಾರೆ. ಆ ಮಾರ್ಗ, ಆ ಅರಿವು, ಆ ನಿಲುವು, ನಮ್ಮ ಜೀವನ ಪಥದ ಮಾರ್ಗದರ್ಶನ ವಾದಾಗ ಯಾತ್ರಾರ್ಥಿಗಳಾದ ನಾವು ಗಂತವ್ಯವನ್ನು ಮುಟ್ಟಿ ಕೃತಕೃತ್ಯರಾದೇವು.





# ವಚನಕಾರರು ಮತ್ತು ಸ್ವಾತಂತ್ರ್ಯ

-ಡಾ. ಸೀ.ಚ. ಯತೀಶ್ವರ *

ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ೧೨ನೇ ಶತಮಾನ ವಿಶೇಷವಾದ ಕಾಲ. ಇಡೀ ಕರ್ನಾಟಕದಲ್ಲಿ ಅಂದಿನ ಸಂದರ್ಭದಲ್ಲಿ ನಡೆದ ಸಾಮಾಜಿಕ ಆಂದೋಲನದ ಪ್ರಯೋಗ ಜಗತ್ತಿನ ಯಾವುದೇ ಸಾಂಸ್ಕೃತಿಕ ಚರಿತ್ರೆಯಲ್ಲಿ ಕಾಣಲಾಗುವುದಿಲ್ಲ. ಪುರಾಣ, ಮಹಾಕಾವ್ಯಗಳಿಂದ ಸ್ಫೂರ್ತಿ ಪಡೆದು ಗತಕಾಲದ ಪಾತ್ರಗಳ ಮೂಲಕ ಕಾವ್ಯಸೃಷ್ಟಿ ಪಡೆದು ಗತಕಾಲದ ಪಾತ್ರಗಳ ಮೂಲಕ ಕಾವ್ಯಸೃಷ್ಟಿ ನಡೆಯುತ್ತಿದ್ದ ಸನ್ನಿವೇಶದಲ್ಲಿ ಮನುಷ್ಯನ ಪರಿಪೂರ್ಣ ಸ್ವಾತಂತ್ರ್ಯವನ್ನು ಕುರಿತ ಚಿಂತನೆ ನಡೆದದ್ದು ವಿನೂತನವಾದುದು. ಮಾನವನ ಘನತೆಯನ್ನು ಎತ್ತಿ ಹಿಡಿಯಲು ವಚನಕಾರರು ಸ್ವಾತಂತ್ರ್ಯ ವನ್ನು ಪ್ರತಿಪಾದಿಸಿದ್ದಷ್ಟೇ ಅಲ್ಲ ಅನುಷ್ಠಾನಗೊಳಿಸಿದರು.

ಮನುಷ್ಯನಲ್ಲಿರಬಹುದಾದ ಪ್ರಜ್ಞೆ ಪರಿಪೂರ್ಣವಾಗಿ ವಿಕಾಸವಾಗಬೇಕಾದರೆ ಸ್ವಾತಂತ್ರ್ಯ ಅಗತ್ಯ ಎಂಬುದನ್ನು ವಚನಕಾರರು ಕಂಡುಕೊಂಡರು. ಇದರ ಪರಿಣಾಮವಾಗಿ ಸಮಾಜದಲ್ಲಿ ಸಂಚಲನ ಸಾಧ್ಯವಾಯಿತು. ಪರಿವರ್ತನೆಗೆ ದಾರಿಯಾಯಿತು. ವ್ಯಕ್ತಿ ಸಮಾಜದ ಪ್ರಮುಖ ಅಂಗ. ವ್ಯಕ್ತಿ ಮತ್ತು ಸಮಾಜದ ಸಂಬಂಧ ಗಟ್ಟಿಗೊಂಡು ಸುಧಾರಣೆ ಯಾಗಬೇಕಾದರೆ ಅದಕ್ಕೆ ಪೂರಕವಾದ ಸ್ವಾತಂತ್ರ್ಯ ಅಗತ್ಯ. ಆದುದರಿಂದಲೇ ಮನುಷ್ಯನಲ್ಲಿರಬಹುದಾದ ಸಮಗ್ರ ಶಕ್ತಿ ಪ್ರಕಟಣೆಗೆ ಸ್ವಾತಂತ್ರ್ಯ ಅನಿವಾರ್ಯವೂ ಹೌದು.

ಮಾನವ ಮೂಲತಃ ಸಮಾಜ ಜೀವಿ. ಅವನು ಒಂಟಿಯಾಗಿ ಜೀವನ ನಡೆಸಲು ಸಾಧ್ಯವಿಲ್ಲ. ವ್ಯಕ್ತಿ ಬೇರೆ ಯವರೊಂದಿಗೆ ಅರಿತು ಸಹಜೀವನ ನಡೆಸಿದಾಗ ಮಾತ್ರವೇ ಉತ್ತಮ ಜೀವನ ನಡೆಸಲು ಸಾಧ್ಯವಾಗುತ್ತದೆ. ಸಮಾಜ ಜೀವನದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನದೇ ಆದ ಸ್ವಹಿತಾ ಸಕ್ತಿಯನ್ನು ಹೊಂದಿದ್ದು ಅವುಗಳನ್ನು ಈಡೇರಿಸಿಕೊಳ್ಳಲು ಇತರರೊಂದಿಗೆ ವ್ಯವಹರಿಸುವುದು ಸಹಜ. ಇಂಥಹ ಸಂದರ್ಭದಲ್ಲಿ ಪರಸ್ಪರ ಘರ್ಷಣೆಗಳಿಗೆ ಅವಕಾಶವಾಗಿ ಶಾಂತಿಯುತವಾಗಿ ಇತ್ಯರ್ಥಪಡಿಸಿಕೊಂಡಾಗ ಮಾತ್ರ ಸಮಾಜದಲ್ಲಿ ಸುವ್ಯವಸ್ಥಿತ ಜೀವನವನ್ನು ನಡೆಸಲು ಸಾಧ್ಯ ವಾಗುತ್ತದೆ. ಇದೆಲ್ಲ ಸಾಧ್ಯವಾಗಬೇಕಾದರೆ ಸರ್ವಾಧಿಕಾರ ಮನೋಧರ್ಮದಿಂದ ಸಾಧ್ಯವಿಲ್ಲ. ಬದಲಾಗಿ ಸ್ವಾತಂತ್ರ್ಯ ಪೂರ್ಣ ವಿಚಾರಗಳಿಂದ ಸಾಧ್ಯವಾಗುತ್ತದೆ. ವ್ಯಕ್ತಿಯ ವ್ಯಕ್ತಿತ್ವ ವಿಕಾಸಕ್ಕೆ, ವ್ಯಕ್ತಿಯು ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಅನುಭವಿಸಲು ಸ್ವಾತಂತ್ರ್ಯ ಅತ್ಯಂತ ಪೂರಕ ಎಂಬುದನ್ನು ವಚನಕಾರರು ಮನಗಂಡರು.

ವ್ಯಕ್ತಿಯ ವ್ಯಕ್ತಿತ್ವ ವಿಕಾಸಕ್ಕೆ ವ್ಯಕ್ತಿಯು ತನ್ನ ಇಚ್ಛೆಯನ್ನು ನಿರ್ಭಯವಾಗಿ ವ್ಯಕ್ತಪಡಿಸಲು 'Liberty' ಅಗತ್ಯ. ವ್ಯಕ್ತಿಗೆ ಮುಕ್ತ ಚಿಂತನೆಯ ಅವಕಾಶವನ್ನು ನೀಡಿದಾಗ ಮಾತ್ರ ತನ್ನ ವ್ಯಕ್ತಿತ್ವ ವಿಕಾಸ, ತನಗೆ ಇಷ್ಟವಾದ ಕಾಯಕ ನಿರ್ವಹಿಸಲು, ತನ್ನ ಅಭಿವೃದ್ಧಿ ಹೊಂದಲು ಸಾಧ್ಯ. ಆದುದರಿಂದ ವ್ಯಕ್ತಿಗೆ ಸ್ವಾತಂತ್ರ್ಯ ಅತ್ಯಂತ ಅವಶ್ಯಕವಾದುದು. 'ಲಿಬರ್ಟಿ' ಎಂದರೆ ವ್ಯಕ್ತಿ ತನಗೆ ಇಷ್ಟವಾದ ಜೀವನಕ್ರಮ ವನ್ನು ಅನುಸರಿಸಲು ತನ್ನ ಇಚ್ಛೆಯನ್ನು ಮುಕ್ತವಾಗಿ ವ್ಯಕ್ತ ಪಡಿಸಲು ಇರುವ ಅವಕಾಶವಾಗಿದೆ. ಸ್ವಾತಂತ್ರ್ಯವೆಂದರೆ ಆರ್ಥಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಮೊದಲಾದ ಕ್ಷೇತ್ರಗಳಲ್ಲಿ ವ್ಯಕ್ತಿಗೆ ಇರುವ ಸ್ವಾತಂತ್ರ್ಯವೇ ಆಗಿರುತ್ತದೆ. ವಚನಕಾರರು ಈ ಮೇಲಿನ ಎಲ್ಲ ಸ್ವಾತಂತ್ರ್ಯ ಗಳ ಅಗತ್ಯವನ್ನು ಪ್ರತಿಪಾದಿಸಿ ಪರಿಪೂರ್ಣ ಸಮಾಜದ ಕನಸನ್ನು ನನಸು ಮಾಡಲು ಪ್ರಯತ್ನಪಟ್ಟವರು. ಅಂದಿನ ಬಿಜ್ಜಳನ ರಾಜಪ್ರಭುತ್ವ ವಚನಕಾರರ ವ್ಯಕ್ತಿಸ್ವಾತಂತ್ರ್ಯಕ್ಕೆ ಎಷ್ಟೆಲ್ಲಾ ನಿರ್ಬಂಧ ಹೇರಿ ತನ್ನ ಅಧಿಕಾರ ಸ್ಥಾಪಿಸಲು ಪ್ರಯತ್ನಿಸಿದರೂ ಅದರಲ್ಲಿ ಬಿಜ್ಜಳನ ಪ್ರಭುತ್ವ ವಿಫಲತೆಯನ್ನು ಕಾಣುವಂತಾದುದು ಚಾರಿತ್ರಿಕ ಸತ್ಯ.

ನಮ್ಮ ರಾಷ್ಟ್ರದ ಅಪೂರ್ವ ರಾಷ್ಟ್ರವಾದಿ ಚಿಂತಕರೂ, ಬುದ್ಧಿಜೀವಿ ರಾಜಕಾರಣಿಗಳೂ ಆಗಿದ್ದ ಸೂಕ್ಷ್ಮ ಸಂವೇದನೆಯ ಡಾ. ರಾಮಮನೋಹರ ಲೋಹಿಯಾ ರವರು ಕಮ್ಯುನಿಸ್ಟ್ ತತ್ವವನ್ನು ನಿರಾಕರಿಸುತ್ತಾ ಒಂದು ಸುಂದರ ಸೂತ್ರವನ್ನು ಮುಂದಿಟ್ಟಿದ್ದಾರೆ.

* ಸಹ-ಪ್ರಾಧ್ಯಾಪಕರು, ಎ.ವಿ.ಕೆ. ಮಹಿಳಾ ಕಾಲೇಜು, ಹಾಸನ-573 201. ದೂ: 9448867043.

'ಸಾಮ್ಯವಾದ=ಸಮಾಜವಾದ+ ಸರ್ವಾಧಿಕಾರತ್ವ+ ರಷ್ಯಾ + ಯುದ್ಧ(–) ಸ್ವಾತಂತ್ರ್ಯ'.

ಅಂದರೆ ಮನುಷ್ಯನಿಗೆ ಸರ್ಕಾರ ಎಲ್ಲವನ್ನು ನೀಡಿ ಸ್ವಾತಂತ್ರ್ಯ ನಿರಾಕರಿಸಲ್ಪಟ್ಟರೆ ಅದರಿಂದ ಯಾವ ಪ್ರಯೋಜನವೂ ಆಗಲಾರದು. ಆದುದರಿಂದ ಮನುಷ್ಯನಿಗೆ ಬೇಕಾದುದು ಸ್ವಾತಂತ್ರ್ಯವೇ ವಿನಃ ಬೇರೆಲ್ಲಾ ವಿಷಯಗಳಲ್ಲ' ಎಂಬುದು ಲೋಹಿಯಾರವರ ಸ್ವಾತಂತ್ರ್ಯ ಪರವಾದ ಗಟ್ಟಿಯಾದ ಮತ್ತು ದೃಢವಾದ ಚಿಂತನೆಯಾಗಿತ್ತು.

ವಿಶ್ವವಿಜೇತ ಸ್ವಾಮಿ ವಿವೇಕಾನಂದರು 'ಆತ್ಮಸ್ವಾತಂತ್ರ್ಯ'ವನ್ನು ಕುರಿತಂತೆ ತಮ್ಮ ವಿಚಾರ ಲಹರಿಯನ್ನು ಹೀಗೆ ಪ್ರತಿಪಾದಿಸಿದ್ದಾರೆ. 'ನಾವು ನಮಗೆ ಕಣ್ಣಿದೆ ಎಂಬುದನ್ನು ಪರಿಣಾಮದ ಮೂಲಕ ನೋಡಿದ್ದಲ್ಲದೆ ಹೇಗೆ ಅರಿಯಲಾರೆವೋ ಹಾಗೆಯೇ ಪರಿಣಾಮದ ಮೂಲಕವಾಗಿ ಅಲ್ಲದೆ ಆತ್ಮನನ್ನು ಅರಿಯಲಾಗುವುದಿಲ್ಲ. ಅದನ್ನು ಇಂದ್ರಿಯಗಳು ಅರಿಯುವ ಸ್ಥಿತಿಗೆ ತರಲಾಗುವುದಿಲ್ಲ. ನಾವು ಆತ್ಮರುಗಳು ಎಂದು ಅರಿತಾಗ ಮುಕ್ತರಾಗುವೆವು. ಆತ್ಮ ಎಂದಿಗೂ ಬದಲಾಗುವುದಿಲ್ಲ. ಅದು ಮತ್ತಾವ ಕಾರಣಕ್ಕೂ ಒಳಗಾಗುವುದಿಲ್ಲ. ಏಕೆಂದರೆ ಅದೇ ಕಾರಣವಾಗಿರುವುದು. ಅದು ಸ್ವಯಂಭೂ. ಮತ್ತಾವ ಕಾರಣಕ್ಕೂ ಒಳಗಾಗದ ಯಾವುದಾದರೂ ಒಂದನ್ನು ನಿಮ್ಮಲ್ಲಿ ನೀವು ಕಂಡು ಹಿಡಿದರೆ ಆಗ ನೀವು ಆತ್ಮನನ್ನು ಅರಿತಂತೆ.

ಸ್ವಾತಂತ್ರ್ಯ ಮತ್ತು ಮುಕ್ತಿ ಇವುಗಳಲ್ಲಿ ಒಂದನ್ನು ಬಿಟ್ಟು ಮತ್ತೊಂದು ಇರಲಾರದು. ಮುಕ್ತನಾಗಬೇಕಾದರೆ ಪ್ರಕೃತಿಯ ನಿಯಮಗಳಿಗೆ ಅತೀತನಾಗಿರಬೇಕು. ನಾವು ಅಜ್ಞಾನಿಗಳಾಗಿರುವವರೆಗೆ ನಿಯಮವಿರುವುದು. ಜ್ಞಾನ ಬಂದೊಡನೆಯೆ ನಿಯಮವೆಂಬುದಿಲ್ಲ. ನಾವು ಸ್ವತಂತ್ರರು ಎಂದು ಗೊತ್ತಾಗುವುದು ಇಚ್ಛೆ ಎಂದಿಗೂ ಸ್ವತಂತ್ರವಾಗಲಾರದು. ಇದು ಕಾರ್ಯಕಾರಣಗಳ ನಿಯಮಕ್ಕೆ ಒಳಪಟ್ಟಿದೆ. ಇಚ್ಛೆಯ ಹಿಂದೆ ಇರುವ ನಾನು ಸ್ವತಂತ್ರನು. ಅದೇ ಆತ್ಮ ನಾನು ಮುಕ್ತ – ಇದರ ಆಧಾರದ ಮೇಲೆಯೇ ನಾವು ಬಾಳಬೇಕಾಗಿದೆ, ಬದುಕಬೇಕಾಗಿದೆ. ಮುಕ್ತಿ ಎಂದರೆ ಅಮೃತತ್ವ

ವಚನಕಾರರು ಸ್ಥಾಪಿಸಿದ ಅನುಭವ ಮಂಟಪ ವಿಚಾರ ಸ್ವಾತಂತ್ರ್ಯದ ಮೊದಲ ವಿಶ್ವವಿದ್ಯಾನಿಲಯ ಎಂದು ಕರೆಯಬಹುದು. ಏಕೆಂದರೆ ಮಾನವ ಸಮಾನತೆ ಮತ್ತು ಸ್ವಾತಂತ್ರ್ಯವನ್ನು ಬಯಸುವ ಸೃಜನಶೀಲ ಮನಸ್ಸುಗಳು ಒಂದೆಡೆ ಸೇರಿ ಮುಕ್ತ ಸಮಾಲೋಚನೆಯಲ್ಲಿ ತೊಡಗಿದವು. ಧರ್ಮ, ಸಮಾಜ, ನೀತಿ, ಸಂಪನ್ಮೂಲ ಹಂಚಿಕೆ, ಆಧ್ಯಾತ್ಮ ಇತ್ಯಾದಿ ವಿಚಾರಗಳನ್ನು ಕುರಿತು ಚಿಂತನೆಯ ಮಂಥನ ನಡೆಸಿದರು. ಆದುದರಿಂದಲೇ ಡಾ.ಎಸ್.ಆರ್. ಗುಂಜಾಳರವರ ಪ್ರಕಾರ 'ಅನುಭವಮಂಟಪ ಒಂದು ಸುಸಜ್ಜಿತ ವಿಶ್ವವಿದ್ಯಾನಿಲಯ ಆಗಿತ್ತು' ಎಂದಿದ್ದಾರೆ. 'ಅನುಭವ ಮಂಟಪದ ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣ ಪಡೆದ ಲಕ್ಷಾವಧಿ ಜನರು ಸುಸಂಸ್ಕೃತರಾದರು. ಸತ್ಯನಿಷ್ಠರಾದರು. ಸರ್ವಜೀವ ದಯಾಪರರಾದರು. ಪ್ರೀತಿಯ ಸಾಕಾರಮೂರ್ತಿಗಳಾದರು, ತ್ಯಾಗಶೀಲರಾದರು. ನಿಸ್ವಾರ್ಥ ಸಮಾಜ ಸೇವಾ ದುರಂಧರರಾದರು. ನವಸಮಾಜ ನಿರ್ಮಾಪಕರಾದರು. ಇವರು ಸರ್ವೋದಯ ತತ್ವಗಳನ್ನು ಬಿತ್ತರಿಸುವ ಸಾಹಿತ್ಯ ರಚನೆ ಮಾಡಿದರು.

ವಚನಕಾರರು ನಿಷ್ಠುರ ವಿಮರ್ಶಕರು. ಪರಂಪರೆಯನ್ನು ಕುರಿತು, ಧರ್ಮ, ದೇವರನ್ನು ಕುರಿತು, ತಮ್ಮ ಸುತ್ತಲಿನ ಸಾಮಾಜಿಕ ಪರಿಸರವನ್ನು ಕುರಿತು ವಸ್ತುನಿಷ್ಠವಾಗಿ ವಿಮರ್ಶೆ ಮಾಡಿದವರು. ಹೀಗೆ ವಿಚಾರ ವಿಮರ್ಶೆ ಮಾಡಿದವರು ಪಂಡಿತರಲ್ಲ. ಉತ್ತಮ ಜಾತಿಯಲ್ಲಿ ಹುಟ್ಟಿದರೆ ಮಾತ್ರ ವಿಚಾರ ಮಾಡುವ ಸಾಮರ್ಥ್ಯವಿರುತ್ತದೆ ಎಂಬ ಭ್ರಮೆಗೆ ಒಳಗಾದವರಲ್ಲ. ಸಮಾಜದ ಸಾಮಾನ್ಯ ಸ್ತರಗಳಿಂದ ಬಂದ ಜನ ಯಾವುದೇ ಲಿಂಗಭೇದವಿಲ್ಲದೆ ಬಸವಣ್ಣನವರ ವ್ಯಕ್ತಿ ಕೇಂದ್ರದಲ್ಲಿ ಸಂಘಟಿತರಾಗಿ 'ತಮಂಧಘನ'ವಾದ ಅಂದಿನ ಆವರಣದಲ್ಲಿ ವಿಚಾರದ ದೀಪಾವಳಿಯನ್ನೇ ತೆರೆದರು. ಇದು ವಚನಕಾರರು ಪ್ರತಿಪಾದಿಸಿದ ವಿಚಾರ ಸ್ವಾತಂತ್ರ್ಯಕ್ಕೆ ಪ್ರಮುಖ ನಿದರ್ಶನವಾಗಿದೆ. ಸಂಪ್ರದಾಯದ ಸಂಕೋಲೆಯಲ್ಲಿ ಸಿಲುಕಿದ ಜನಸಮುದಾಯ ಉಸಿರು ಗಟ್ಟುವ ವಾತಾವರಣದಲ್ಲಿ ಬದುಕುತ್ತಿದ್ದ ಸಂದರ್ಭದಲ್ಲಿ ಬಂದ ವಚನಕಾರರು ಸ್ವಾತಂತ್ರ್ಯದ ಮಹತ್ವವನ್ನು ಎತ್ತಿ ಹಿಡಿದರು. ಜನಸಾಮಾನ್ಯರ ಮನಸ್ಸುಗಳಿಗೆ ಒದಗಿದ ನಿರ್ಬಂಧ ನಿಯಂತ್ರಣಗಳನ್ನು ಕಿತ್ತೊಗೆದು ಮುಕ್ತ ಚಿಂತನೆಗೆ ಅವಕಾಶ ಕಲ್ಪಿಸಿದ ಪರಿಣಾಮವಾಗಿ ಅಕ್ಷರ ಸಂಸ್ಕೃತಿಯಿಂದಲೇ ದೂರವುಳಿದು ಎಲ್ಲೋ ಇತಿಹಾಸದ ಕಾಲಗರ್ಭದಲ್ಲಿ ಕಣ್ಮರೆಯಾಗಬಹುದಾಗಿದ್ದವರು ತಮ್ಮ ಅಂತರಂಗದಲ್ಲಿ ಸುಪ್ತವಾಗಿದ್ದ ಭಾವನೆಗಳಿಗೆ ಭಾಷಾರೂಪವನ್ನು ನೀಡಿ ವಚನಗಳನ್ನು ರಚಿಸಲು ಸಾಧ್ಯವಾಗಿತು. ವಚನಕಾರರಿಗೆ ಸಿಕ್ಕ ವಿಚಾರ ಸ್ವಾತಂತ್ರ್ಯದ ಪರಿಣಾಮವಾಗಿ ಮುಕ್ತವಾದ ಚಿಂತನೆ ಸಾಧ್ಯವಾಯಿತು. ಮನೋಕೇಂದ್ರಿತ ಚಿಂತನೆಗಳನ್ನು ದಾಖಲಿಸುವ ಮೂಲಕ ಅಕ್ಷರ ಪ್ರಪಂಚದಲ್ಲಿ ವಿನೂತನ ಕ್ರಾಂತಿಗೆ ದಾರಿಯಾಯಿತು. ಸ್ವಾತಂತ್ರ್ಯ ಸಮಾನತೆ, ಭ್ರಾತೃತ್ವಗಳ ಮಹತ್ವವನ್ನು ಎಲ್ಲ ವಚನಕಾರರು ಮನಗಾಣುವಂತಾಯಿತು.

ಹನ್ನೆರಡನೇ ಶತಮಾನದ ಸಾಮಾಜಿಕ ಸನ್ನಿವೇಶದಲ್ಲಿ ಸಾಮಾನ್ಯ ಜನಸಮುದಾಯಗಳನ್ನು ಧರ್ಮ, ವೇದ, ಶಾಸ್ತ್ರಗಳ ಹೆಸರಿನಲ್ಲಿ ನಡೆಯುತ್ತಿದ್ದ ಶೋಷಣೆಯನ್ನು ಮನಗಂಡ ಬಸವಣ್ಣನವರು ವೇದಶಾಸ್ತ್ರಗಳನ್ನು ನಿರಾಕರಿಸಿದರು. ಆ ಮೂಲಕ ಜನತೆಯ ವೈಚಾರಿಕ ಸ್ವಾತಂತ್ರ್ಯಕ್ಕೆ ಭದ್ರವಾದ ಅಡಿಪಾಯವನ್ನು ಹಾಕಿದರು.

*'ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ, ನಿಗಳವನಿಕ್ಕುವೆ*
*ತರ್ಕದ ಬೆನ್ನಬಾರನೆತ್ತುವೆ, ಆಗಮದ ಮೂಗ*
*ಕೊಯ್ಯುವೆ ನೋಡಯ್ಯ, ಮಹಾದಾನಿ*
*ಕೂಡಲಸಂಗಮದೇವಾ ಮಾದಾರ ಚೆನ್ನಯ್ಯನ*
*ಮನೆಯ ಮಗ ನಾನಯ್ಯಾ'*

ಎಂದಿದ್ದಾರೆ. ಸ್ವಾತಂತ್ರ್ಯದ ಮತ್ತೊಂದು ಮುಖ್ಯವಾದ ಬೆಳವಣಿಗೆಯೆಂದರೆ ಸಾಮಾಜಿಕ ಸಮಾನತೆ, ಸಮಾಜದಲ್ಲಿನ ಎಲ್ಲರೂ ಸಮಾನರು ಎಂಬ ನೆಲೆಯಲ್ಲಿ ಆಲೋಚಿಸಿದವರು ವಚನಕಾರರು. ಸಮಾಜದಲ್ಲಿ ಜಾತಿ, ಧರ್ಮ, ವರ್ಣ, ಲಿಂಗದ ಆಧಾರದ ಮೇಲೆ ಯಾವುದೇ ಪಕ್ಷಪಾತ ಮಾಡಬಾರದು. ಪ್ರತಿಯೊಬ್ಬ ಪ್ರಜೆಯು ತನ್ನ ವ್ಯಕ್ತಿತ್ವವನ್ನು ವಿಕಾಸ ಮಾಡಿಕೊಳ್ಳಲು ಸಮಾನ ಅವಕಾಶಗಳಿರಬೇಕು. ಆದುದರಿಂದ ಬಸವಣ್ಣನವರು ಒಂದು ವಚನದಲ್ಲಿ ಪ್ರತಿಪಾದಿಸುವಂತೆ 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರ ಒಂದೆ ಎಂಬೆ' ಎನ್ನುವ ಮಾತು ವಚನಕಾರರ ನಿರ್ಮಾಣದ ಸಮಾಜದ ರೀತಿಗೆ ಕೈಮಾರ್ಗದಂತಿದೆ.

*ಇವನಾರವ ಇವನಾರವನೆಂದೆನಿಸದಿರಯ್ಯಾ*
*ಇವನಮ್ಮವ ಇವನಮ್ಮವನೆಂದೆನಿಸಯ್ಯಾ*
*ಕೂಡಲಸಂಗಮದೇವಾ*
*ನಿಮ್ಮ ಮಹಾಮನೆಯ ಮಗನೆಂದೆನಿಸಯ್ಯಾ*

ಈ ಮೇಲಿನ ವಚನದಲ್ಲಿ ಎಲ್ಲರನ್ನೂ ಸಮಾನವಾಗಿ ಕಾಣುವ 'ಸಮಾನತೆ'ಯ ಪ್ರಾಮುಖ್ಯತೆಯನ್ನು ಅರ್ಥಪೂರ್ಣವಾಗಿ ವಿವರಿಸಿದ್ದಾರೆ. ಇಡೀ ವಿಶ್ವದಲ್ಲಿ ೨೦ನೇ ಶತಮಾನ ಸಮಾನತೆಯ ಅನುಷ್ಠಾನಕ್ಕಾಗಿ ಅನೇಕ ಸಾಮಾಜಿಕ ಹೋರಾಟಗಳನ್ನು ಕಂಡ ಕಾಲ. ಆದರೆ ಹನ್ನೆರಡನೇ ಶತಮಾನದ ವಚನಕಾರರು ಸಮಾನತೆಯ ಅಡಿಪಾಯದ ಮೇಲೆ ಸಮಾಜ ನಿರ್ಮಾಣದ ಕನಸು ಕಂಡು ನನಸು ಮಾಡುವ ದಿಕ್ಕಿನಲ್ಲಿ ದಿಟ್ಟಹೆಜ್ಜೆಯನ್ನಿಟ್ಟರು.

'ಲಿಂಗಭೇದ'ದ ಹೆಸರಿನಲ್ಲಿ ಇಂದಿಗೂ ಎಷ್ಟೋ ದೇಶಗಳು ಮಹಿಳೆಯರಿಗೆ ನೀಡುವ ಅನೇಕ ಸೌಲಭ್ಯಗಳನ್ನು ನೀಡಲು ನಿರಾಕರಿಸುತ್ತಿರುವ ಈ ಹೊತ್ತಿನಲ್ಲಿಯೂ ಆದ್ಯ ವಚನಕಾರ ಜೇಡರ ದಾಸಿಮಯ್ಯನವರ ವಚನ ಮಹತ್ವಪೂರ್ಣವಾದ ಒಳನೋಟಗಳನ್ನು ನೀಡುತ್ತದೆ. ಸ್ತ್ರೀ ಮತ್ತು ಪುರುಷ ಎಂಬ ಲಿಂಗತಾರತಮ್ಯ ಮಾಡುತ್ತಿರುವ ಸಮಾಜದಲ್ಲಿ ಅಸಮಾನತೆ ಇನ್ನೂ ಜೀವಂತವಾಗಿರುವ ಎಷ್ಟೋ ಸಮಾಜಗಳನ್ನು ಕಾಣುತ್ತೇವೆ. ಆದರೆ ಜೇಡರ ದಾಸಿಮಯ್ಯನವರ ವಚನವನ್ನು ಗಮನಿಸುವುದಾದರೆ

*ಮೊಲೆ ಮೂಡಿ ಬಂದರೆ ಹೆಣ್ಣೆಂಬರು*
*ಗಡ್ಡ ಮೀಸೆ ಬಂದರೆ ಗಂಡೆಂಬರು*
*ನಡುವೆ ಸುಳಿವಾತ್ಮನು ಹೆಣ್ಣು ಅಲ್ಲ*
*ಗಂಡೂ ಅಲ್ಲ ರಾಮನಾಥ.*

ಹೆಣ್ಣು ಮತ್ತು ಗಂಡಿನ ನಡುವಿನ ವ್ಯತ್ಯಾಸ ಕೇವಲ ಶಾರೀರಿಕ ವ್ಯತ್ಯಾಸವೇ ವಿನಃ ಬೌದ್ಧಿಕವಾಗಿ ಇಬ್ಬರೂ ಸಮಾನ ಸಾಮರ್ಥ್ಯವುಳ್ಳವರು ಎಂಬುದನ್ನು ಸ್ವತಂತ್ರ ಮನೋಧರ್ಮದಿಂದ ಇಡೀ ಜಗತ್ತಿಗೆ ಸಾರಿದ ಮೊದಲ ಉದಾರವಾದಿ ಚಿಂತಕ ಜೇಡರ ದಾಸಿಮಯ್ಯ ಎಂಬುದರಲ್ಲಿ ಯಾವ ಉತ್ಪ್ರೇಕ್ಷೆಯು ಇರಲಾರದು. ಈ ಮೂಲಕ ಲಿಂಗ ತಾರತಮ್ಯದ ಮೂಲಕ ನಡೆಯಬಹುದಾದ ಶೋಷಣೆಗೆ ಪೂರ್ಣವಿರಾಮ ನೀಡಿ ಸ್ತ್ರೀ ಸ್ವಾತಂತ್ರ್ಯದ ಮಹತ್ವವನ್ನು ಸಾರುವುದರ ಮೂಲಕ ಜಗತ್ತಿಗೆ ಮೊದಲಿಗರಾದವರು ವಚನಕಾರರು.

ವಚನಕಾರರು ಪ್ರತಿಪಾದಿಸಿದ ಮತ್ತೊಂದು ಪ್ರಮುಖ ಪರಿಕಲ್ಪನೆಯೆಂದರೆ ಆರ್ಥಿಕ ಸ್ವಾತಂತ್ರ್ಯ. ಮನುಷ್ಯ ಆರ್ಥಿಕ

ವಾಗಿ ಸ್ವತಂತ್ರನಾಗಿ ಸ್ವಾವಲಂಬಿ ಮತ್ತು ಸ್ವಾಭಿಮಾನಪೂರ್ಣವಾದ ಬದುಕನ್ನು ರೂಪಿಸಿಕೊಳ್ಳಬೇಕಾದರೆ 'ಕಾಯಕ'ದಲ್ಲಿ ನಿರತನಾಗಬೇಕು. ಕಾಯಕದಲ್ಲಿ ನಿರತನಾಗಿ ಕಾರ್ಯವನ್ನು ದಂಡಿಸಿದಾಗ ಬರುವ ಸಂಪಾದನೆ ಸಂಪನ್ಮೂಲವಾಗುತ್ತದೆ. ಸಮಾಜದಲ್ಲಿ ಉತ್ಪಾದನಾ ಶಕ್ತಿ ಹೆಚ್ಚಲು ಸಾಧ್ಯವಾಗುತ್ತದೆ. ಕಾರ್ಲ್‌ಮಾರ್ಕ್ಸ್‌ರವರ ಪ್ರಕಾರ 'ಆರ್ಥಿಕ ಸಮಾನತೆ ಸಾಧಿಸಬೇಕಾದರೆ ಖಾಸಗಿ ಆಸ್ತಿಯನ್ನು ಮತ್ತು ಬಂಡವಾಳಶಾಹಿ ಉತ್ಪಾದನಾ ವ್ಯವಸ್ಥೆಯನ್ನು ರದ್ದುಪಡಿಸಬೇಕು' ಆಗ ಆರ್ಥಿಕ ಸಮಾನತೆ ಬರಲು ಸಾಧ್ಯ ಎಂದಿದ್ದಾರೆ. ಯಾವ ಸಮಾಜದಲ್ಲಿ ಉಳ್ಳವರು, ಇಲ್ಲದವರು, ಶೋಷಿತರು, ಶೋಷಕ ವರ್ಗ ಇರುತ್ತದೋ ಅಲ್ಲಿ ಆರ್ಥಿಕ ನ್ಯಾಯ ಸಾಧ್ಯವಿಲ್ಲ ಎಂಬುದು ಮಾರ್ಕ್ಸ್‌ರವರ ಅಭಿಮತವಾಗಿತ್ತು. ಆದರೆ ವಚನಕಾರರು ಕಾಯಕದಲ್ಲಿ ಮೇಲು ಕೀಳು ಎಂಬುದನ್ನು ನಿರಾಕರಿಸಿ ಸಮಾನತೆಯನ್ನು ಕಂಡರು. ಇಂದಿಂಗೆ ನಾಳಿಂಗೆ ಎಂದು ಸಂಗ್ರಹಿಸುವುದನ್ನು ನಿರಾಕರಿಸಿದರು. ಕಾಯಕದಿಮ್ದ ಬಂದುದು ಕಾರೆಯ ಸೊಪ್ಪಾದರೂ ಲಿಂಗಕ್ಕರ್ಪಿತ' ಎಂದರು. ಗುರು, ಲಿಂಗ, ಜಂಗಮ ತತ್ವಗಳನ್ನು ಕಾಯಕತತ್ವಕ್ಕೆ ಅಧೀನವಾಗಿಸಿ, ಕಾಯಕದಿಂದ ಸಂಪಾದಿತವಾದುದನು ಭಕ್ತನಾದವನು ತಾನು ಅನುಭವಿಸಿ ಹೆಚ್ಚಾದುದನ್ನು ದಾಸೋಹದ ಮೂಲಕ ಸಮಾಜಕ್ಕೆ ಹಂಚಿಕೆ ಮಾಡಬೇಕೆಂಬ ಕಲ್ಪನೆ ಕ್ರಾಂತಿಕಾರಕವಾದರೂ ವಾಸ್ತವಿಕ ನೆಲೆಗಟ್ಟಿನದಾಗಿತ್ತು. ಆಯ್ದಕ್ಕಿ ಮಾರಯ್ಯನವರು ಪ್ರತಿಪಾದಿಸುವಂತೆ

***'ಕಾಯಕದಲ್ಲಿ ನಿರತನಾದಡೆ ಗುರುದರ್ಶನವಾದರೂ***
***ಮರೆಯಬೇಕು. ಲಿಂಗಪೂಜೆಯಾದರೂ***
***ಮರೆಯಬೇಕು ಜಂಗಮ ಮುಂದಿದ್ದರೂ ಹಂಗು***
***ಹರಿಯಬೇಕು ಕಾಯಕವೇ ಕೈಲಾಸವಾದ ಕಾರಣ***
***ಅಮರೇಶ್ವರ ಲಿಂಗವಾಯಿತ್ತಾದಡು ಕಾಯಕದೊಳು***

ಕಾಯಕದ ಪ್ರಾಮುಖ್ಯತೆಯನ್ನು ಸಾರುವ ಸಾರ್ವಕಾಲಿಕ ಸಂದೇಶ ಈ ವಚನದಲ್ಲಿ ಅರ್ಥಪೂರ್ಣವಾಗಿ ವರ್ಣಿಸಿರುವುದನ್ನು ಕಾಣಬಹುದು.

ವಚನಕಾರರು ಪ್ರತಿಪಾದಿಸಿದ ಸ್ವಾತಂತ್ರ್ಯ ಎಂದರೆ ರಾಜಕೀಯ ಸ್ವಾತಂತ್ರ್ಯ ಇದರ ಅರ್ಥವೆಂದರೆ ಪೂರ್ಣ ಪ್ರಮಾಣದಲ್ಲಿ ಸ್ವಾತಂತ್ರ್ಯ ಖಾತರಿಯನ್ನು ಹಾಗೂ ವಾಕ್ ಸ್ವಾತಂತ್ರ್ಯವನ್ನು ನೀಡಿರುವುದು. ಸಂಘಸಂಸ್ಥೆಗಳನ್ನು ಸ್ಥಾಪಿಸಿಕೊಳ್ಳಲು ಅವಕಾಶ ಕಲ್ಪಿಸುವುದಾಗಿದೆ. ಈ ಅಂಶದ ಹಿನ್ನಲೆಯಲ್ಲಿ ವಚನಕಾರರು ಅನುಭವಮಂಟಪ ಸಂಸ್ಥೆಯನ್ನು ಸ್ಥಾಪಿಸಿಕೊಂಡು ನವಸಮಾಜ ನಿರ್ಮಾಣದ ರೂಪುರೇಷೆಗಳನ್ನು ತೀರ್ಮಾನಿಸುವ ರೂಪಿಸುವ ಸಂಕಲ್ಪ ಮಾಡಿದ ಪರಿಣಾಮ ಅಸಂಖ್ಯಾತ ಪ್ರಜ್ಞಾವಂತ ವಚನಕಾರರು ಮತ್ತು ವಚನಕಾರ್ತಿಯರು ರೂಪುಗೊಂಡು ಸಂಪ್ರದಾಯಬದ್ಧ ವ್ಯವಸ್ಥೆಯನ್ನು ಪ್ರಶ್ನಿಸುವ, ತಕ್ಕ ಪರಿಹಾರ ಹುಡುಕುವ ಪ್ರಯತ್ನದಲ್ಲಿ ಯಶಸ್ವಿಯಾದರು.

ವಚನ ಚಳುವಟಿಯ ಪ್ರಮುಖ ಸಂಘಟಕರಾದ ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿ ಪ್ರಧಾನಿಯಾಗಿದ್ದರೂ ತನ್ನ ಆತ್ಮಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಬಲಿಗೊಟ್ಟುಕೊಂಡು ಆಡಳಿತ ನಡೆಸಿದವರು. ಅನುಭಾವಿಕ ನಿಲುವಿನ ವ್ಯಕ್ತಿಯಾದ ಅವರಿಗೆ ಅಧಿಕಾರದ ಬಗೆಗೆ ಯಾವ ಭ್ರಮೆಗಳೂ ಇದ್ದಂತಿರಲಿಲ್ಲ. ಆಸ್ಥಾನದಲ್ಲಿಯೇ ಇದ್ದರೂ ಅದಕ್ಕೆ ಅಂಟಿಯೂ ಅಂಟದಂತಿರುವ ಸ್ವಭಾವ ಬಸವಣ್ಣನವರಿಗೆ ಜನ್ಮಜಾತವಾಗಿ ಬಂದಂತೆ ಕಾಣುತ್ತದೆ. 'ಅರಸು ಮುನಿದಡೆ ನಾಡೊಳಗಿರಬಾರದಯ್ಯಾ' ಎಂಬ ಮಾತಿನಲ್ಲಿ ರಾಜನ ಆಗ್ರಹಕ್ಕೆ ಒಳಗಾದರೆ ಅಂಥವನಿಗೆ ಉಳಿಗಾಲವಿಲ್ಲ ಎಂಬ ಕಟುಸತ್ಯವನ್ನು ಅರ್ಥಮಾಡಿಕೊಂಡವರಾಗಿದ್ದರು. ಬಿಜ್ಜಳನಲ್ಲಿ ಉದ್ಯೋಗ ಮಾಡುವ ಅನಿವಾರ್ಯ ಪರಿಸ್ಥಿತಿಯಿದ್ದರೂ ಬಸವಣ್ಣನವರು ವ್ಯವಹಾರ ಮತ್ತು ಆಧ್ಯಾತ್ಮಗಳನ್ನು ಬೆರಸದೆ ಎಲ್ಲ ಬಗೆಯ ಹೋರಾಟಗಳಿಗೂ ತಮ್ಮ ವ್ಯಕ್ತಿತ್ವವನ್ನು ಒಡ್ಡಿಕೊಂಡು ದಿಟ್ಟತನದಿಂದ ನಿಂತವರು. ರಾಜನ ಅರಮನೆಯಲ್ಲಿ ಇದ್ದ ಕಾರಣಕ್ಕೆ ತಮ್ಮ ವ್ಯಕ್ತಿತ್ವವನ್ನು ಒಡ್ಡಿಕೊಂಡು ದಿಟ್ಟತನದಿಂದ ನಿಂತವರು. ರಾಜನ ಅರಮನೆಯಲ್ಲಿ ಇದ್ದ ಕಾರಣಕ್ಕೆ ತಮ್ಮ ವ್ಯಕ್ತಿತ್ವವನ್ನು ಯಾವತ್ತೂ ಮಾರಿಕೊಂಡವರಲ್ಲ ಬಸವಣ್ಣನವರು ತಮ್ಮ ವ್ಯಕ್ತಿತ್ವ ಎಷ್ಟೊಂದು ಸ್ವಾತಂತ್ರ್ಯದ ಆರಾಧನೆಯಿಂದ ಕೂಡಿರುವುದು ಎಂಬುದನ್ನು ಈ ವಚನದಲ್ಲಿ ಪ್ರತಿಪಾದಿಸುವ ಮೂಲಕವಾಗಿ ತಾವು ಸ್ವಾತಂತ್ರ್ಯದ, ಪ್ರಜಾಪ್ರಭುತ್ವದ ಪರ ಮನಸ್ಸುಳ್ಳವರು, ಚಿಂತಕರು ಎಂಬುದನ್ನು ಗಟ್ಟಿಧ್ವನಿಯಲ್ಲಿ ಅನುಮೋದಿಸಿ ತಮ್ಮ ಅಂಗೀಕಾರದ ಮುದ್ರೆಯೊತ್ತಿ ಸಾರ್ವಕಾಲಿಕವಾದ ಸ್ವಾತಂತ್ರ್ಯದ ಪರಿಕಲ್ಪನೆಗೆ ತಮ್ಮದೆ ಕೊಡುಗೆ ನೀಡಿದ್ದಾರೆ.





# ಹಳದಿ ಬಣ್ಣದಿಂದ ಕಂಗೊಳಿಸುವ ಅರಿಷಣ

## *Curcuma longa, Linn. Zingiberaceae* *

–ಡಾ|| ಶೈಲೇಶ್ ಎಂ.ಡಿ.

ಅಯುರ್ವೇದ ರಿಶಿಣವು ವೇದಕಾಲದಿಂದಲೂ ಹೆಸರುವಾಸಿಯಾದ ದ್ರವ್ಯಗಳಲ್ಲೊಂದಾಗಿದೆ. ಅಡುಗೆ ಮನೆಯಿಂದ ಹಿಡಿದು ಮದುವೆ ಮಂಟಪದವರೆಗೆ ಅರಿಶಿಣವು ಉಪಯೋಗಿ. ಹಿಂದಿನ ಕಾಲದಲ್ಲಿ ಹೆಣ್ಣು ಮಕ್ಕಳು ಅರಿಷಿಣವನ್ನು ಸೌಭಾಗ್ಯದ ಮುತ್ತೈದೆತನದ ಗುರುತಾಗಿ ಮೈಗೆ ಹಚ್ಚಿಕೊಳ್ಳುತ್ತಿದ್ದರು. ಆ ವಾಡಿಕೆಯು ಇರುವವರೆಗೆ ಹೆಂಗೆಳೆಯರ ಮೈ ಮೊಗಗಳು ಚಿನ್ನದಂತೆ ಬೆಳಗುತ್ತಿದ್ದವು, ಚರ್ಮರೋಗಗಳಿಲ್ಲದೇ ಹೊಳೆಯುತ್ತಿದ್ದವು. ಅರಿಷಿಣವನ್ನು ಪೂಜೆಗಳಿಗೆ, ಅಡುಗೆಗಳಿಗೆ ಹೇರಳವಾಗಿ ಉಪಯೋಗಿಸುತ್ತಿದ್ದಾರೆ. ನಾವು ದಿನನಿತ್ಯ ತಿನ್ನುವ ಆಹಾರವು ಕಲಬೆರಕೆಯಿಂದ ಅನೇಕ ರಾಸಾಯನಿಕ ವಸ್ತುಗಳಿಂದ ಕೂಡಿದೆ. ಇಂತಹ ರಾಸಾಯನಿಕಗಳು ದೇಹದ ಮೇಲೆ ಅನೇಕ ತರಹದ ದುಷ್ಪರಿಣಾಮಗಳನ್ನು ಬೀರುತ್ತದೆ. ಆದರೆ ಅರಿಷಿಣವನ್ನು ಅಡುಗೆಗೆ ಬಳಸುವುದರಿಂದ ಇಂತಹ ದುಷ್ಪರಿಣಾಮಗಳಿಂದ ದೇಹವನ್ನು ರಕ್ಷಿಸಬಹುದು. ಯಾಕೆಂದರೆ ಅರಿಷಿಣವು ಉತ್ತಮ ವಿಷನಾಶಕವಾಗಿದೆ. ವಿಷನಾಶಕ ಅರಿಷಿಣವು ಆಹಾರಕ್ಕೆ ರುಚಿ, ಬಣ್ಣ ಮತ್ತು ಪರಿಮಳವನ್ನು ನೀಡುತ್ತದೆ.

**ಬಹು ಭಾಷಾ ಹೆಸರುಗಳು :**

| | | |
|---|---|---|
| ಕನ್ನಡ | : | ಅರಿಷಿಣ |
| ಸಂಸ್ಕೃತ | : | ಹರಿದ್ರಾ |
| ತುಳು | : | ಮಂಜೊಲ್ |
| ಹಿಂದಿ | : | ಹಳ್‌ದಿ |
| ಇಂಗ್ಲಿಷ್ | : | ಟರ್ಮರಿಕ್ |

**ಪರ್ಯಾಯ ಪದಗಳು :**

ಹರಿದ್ರಾ, ಕಾಂಚನೀ, ಕ್ರಿಮಿಘ್ನಾ, ಯೋಷಿತಪ್ರಿಯಾ, ಗೌರೀ, ವರವರ್ಣಿಸೀ, ಪೀತಾ, ಹರಿತಾ, ಜಯಂತೀ, ಹಟ್ಟವಿಲಾಸಿನೀ, ನಿಶಾ.

**ದ್ರವ್ಯದ ವರ್ಣನೆ :**

ಅರಿಶಿನ ಒಂದು ಬಹುವಾರ್ಷಿಕ ಸಸ್ಯ. ಬಹು ವರ್ಷಾಯುವಾದ ಅರಿಶಿಣವು ಸುಮಾರು ಒಂದರಿಂದ ಮೂರು ಮೀಟರ್ ಎತ್ತರಕ್ಕೆ ಬೆಳೆಯುತ್ತದೆ. ಎಲೆಯು ೧–೨ ಮೀಟರ್‌ನಷ್ಟು ಉದ್ದವಾಗಿ ಅರಿಷಿಣ ಗಡ್ಡೆಯ ವಾಸನೆಯನ್ನು ಬೀರುತ್ತದೆ. ಭೂ ಅಂತರ್ಗತ ಕಾಂಡವನ್ನು ಹೊಂದಿದ್ದ ಈ ಸಸ್ಯವು ಶುಂಠಿ ಸಸ್ಯಕ್ಕೆ ಹೋಲುತ್ತದೆ. ಈ ಸಸ್ಯವು ಹಳದಿ ಬಣ್ಣದ ಹೂವುಗಳನ್ನು ಬಿಡುತ್ತದೆ. ಅರಿಷಿಣವನ್ನು ಸಾಮಾನ್ಯವಾಗಿ ಜೂನ್‌ನಲ್ಲಿ ನೆಟ್ಟು, ಡಿಸೆಂಬರ್–ಜನವರಿಯಲ್ಲಿ ಕಟಾವು ಮಾಡುತ್ತಾರೆ. ಸಾಮಾನ್ಯವಾಗಿ ಎಲ್ಲ ಕಡೆಗಳಲ್ಲಿ ಬೆಳೆಯುವ ಅರಿಷಿಣವು ರಾಜಸ್ತಾನ್, ಮಧ್ಯಪ್ರದೇಶ, ಮಹಾರಾಷ್ಟ್ರ, ಗೋವಾ, ಕರ್ನಾಟಕ, ಕೇರಳ, ತಮಿಳುನಾಡು, ಆಂಧ್ರಪ್ರದೇಶ ಮುಂತಾದ ರಾಜ್ಯಗಳಲ್ಲಿ ಹೆಚ್ಚಾಗಿ ಬೆಳೆಯುತ್ತಾರೆ.

**ವಿಧಗಳು :**

ಹರಿದ್ರಾದಲ್ಲಿ ನಾಲ್ಕು ವಿಧಗಳಿವೆ ಅವು

೧. **ಹರಿದ್ರಾ** (Cucuma longa)
೨. **ದಾರುಹರಿದ್ರಾ** (Berberis aristata)
೩. **ವನಹರಿದ್ರಾ** (Curcuma aromatica)
೪. **ಆಮ್ರಗಂಧಿ ಹರಿದ್ರಾ** (Curcuma amada)

**ಉಪಯುಕ್ತ ಅಂಗಗಳು :**

ಅರಿಷಿಣ ಬೇರು (ಗಡ್ಡೆ)

**ದ್ರವ್ಯದ ಗುಣಧರ್ಮಗಳು :**

| | |
|---|---|
| ರಸ | : ತಿಕ್ತ, ಕಟು |
| ಸಂಸ್ಕೃತ | : ರೂಕ್ಷ, ಲಘು |
| ವೀರ್ಯ | : ಉಷ್ಣ |
| ವಿಪಾಕ | : ಕಟು |
| ಕರ್ಮ | : ಕಫವಾತಹರ, ವಿಷಘ್ನ, ವರ್ಣ್ಯ, ಕ್ರಿಮಿಘ್ನ |

* ಆಳ್ವಾಸ್ ಆಯುರ್ವೇದಿಕ್ ಮೆಡಿಕಲ್ ಕಾಲೇಜು, ಮೂಡಬಿದರೆ, ಮಂಗಳೂರು.

ಹರಿದ್ರಾ ಸ್ವರಸೇ ತಿಕ್ತಾ ರೋಕ್ಷೋಷ್ಣಾ ವಿಷಕುಷ್ಠನುತ್ ।
ಕಂಡೂಮೇಹವ್ರಣಾನ್ ಹಂತಿ ದೇಹವರ್ಣವಿಧಾಯಿನೀ ॥
ವಿಶೋಧಿನೀ ಕ್ರಿಮಿಹರಾ ಪೀನಸಾರುಚಿನಾಶಿನೀ ॥

(ಧನ್ವಂತರಿ ನಿಘಂಟು)

ಎಂದರೆ ಅರಿಷಿಣವು ರುಚಿಯಲ್ಲಿ ಕಹಿಯಾಗಿದ್ದು, ರೂಕ್ಷ ಗುಣದಿಂದ ಕೂಡಿದೆ. ಉಷ್ಣ ವೀರ್ಯದಿಂದ ಕೂಡಿದೆ. ವಿಷ ಮತ್ತು ಕುಷ್ಠ ರೋಗಗಳನ್ನು ಪರಿಹರಿಸುತ್ತದೆ. ತುರಿಕೆ, ಪ್ರಮೇಹ ಗಾಯಗಳನ್ನು ಗುಣಪಡಿಸುತ್ತದೆ. ಚರ್ಮದ ಸೌಂದರ್ಯವನ್ನು ಹೆಚ್ಚಿಸುತ್ತದೆ. ರಕ್ತ ಶೋಧಕವೂ, ಕ್ರಿಮಿ ಹರವೂ, ಪೀನಸ ಮತ್ತು ಅರುಚಿ ರೋಗಗಳನ್ನು ನಿವಾರಿಸುತ್ತದೆ.

**ಔಷಧಿ ಪ್ರಮಾಣ :**

ಸ್ವರಸ : ೧೦-೧೨ ಮಿ.ಲೀ.
ಚೂರ್ಣ : ೧-೩ ಗ್ರಾಂ.
ಫಾಂಟ : ೨೦-೫೦ ಮಿ.ಲಿ.

**ಔಷಧೀಯ ಯೋಗಗಳು :**

* ಹರಿದ್ರಾ ಖಂಡ * ನಿಶಾಮಲಕೀ * ಹರಿದ್ರಾದಿ ಧೂಮವರ್ತಿ * ಹರಿದ್ರಾದಿ ಘೃತ * ಹರಿದ್ರಾದಿ ತೈಲ

**ಔಷಧೀಯ ಉಪಯೋಗಗಳು :**

* ಅರಿಷಿಣ ಹಾಗೂ ಶ್ರೀಗಂಧವನ್ನು ತೇಯ್ದು ಪ್ರತಿದಿನ ಮುಖಕ್ಕೆ ಹಚ್ಚಿಕೊಂಡರೆ ಮುಖವು ಕಾಂತಿಯುತವಾಗುತ್ತದೆ. ಮೊಡವೆ ಮತ್ತು ಕಲೆಗಳು ಇದರಿಂದ ಗುಣವಾಗುತ್ತದೆ.
* ಹುರಿದ ಅರಿಷಿಣ ಚೂರ್ಣವನ್ನು ಜೇನಿನೊಂದಿಗೆ ತೆಗೆದುಕೊಳ್ಳುವುದರಿಂದ ಅಸ್ತಮಾ, ಕೆಮ್ಮುರೋಗಕ್ಕೆ ಒಳ್ಳೆಯದು.
* ಅರಿಷಿಣ ಚೂರ್ಣವನ್ನು ಜೇನಿನೊಂದಿಗೆ ಬೆರೆಸಿ ನೆಲ್ಲಿ ಕಾಯಿಯ ಸ್ವರಸದೊಂದಿಗೆ ಸೇವಿಸುವುದರಿಂದ ಪ್ರಮೇಹ ರೋಗವು ಕಡಿಮೆಯಾಗುತ್ತದೆ.
* ಶರೀರದ ಯಾವುದೇ ಭಾಗಕ್ಕೆ ಪೆಟ್ಟು ಬಿದ್ದು ಊದಿ ಕೊಂಡಿದ್ದರೆ ಅರಿಷಿಣಪುಡಿ, ಉಪ್ಪು ಸೇರಿಸಿ ನಿಂಬೆರಸದಲ್ಲಿ ಅರೆದು ಲೇಪ ತಯಾರಿಸಿಕೊಂಡು ಅದನ್ನು ಬಿಸಿ ಮಾಡಿ ಪೆಟ್ಟು ಬಿದ್ದಿರುವ ಜಾಗಕ್ಕೆ ಹಚ್ಚಿದರೆ ಊತ ಕಡಿಮೆಯಾಗಿ ನೋವು ನಿವಾರಣೆಯಾಗುತ್ತದೆ.
* ಶೀತ, ನೆಗಡಿ ಇರುವಾಗ ಒಂದು ಲೋಟ ಬಿಸಿಹಾಲಿಗೆ ಒಂದು ಚಮಚ ಅರಿಷಿಣ ಪುಡಿ ಹಾಗೂ ಬೆಲ್ಲ ಸೇರಿಸಿ ದಿನಕ್ಕೆ ಎರಡು ಬಾರಿ ಸೇವಿಸಬೇಕು.
* ಅರಿಷಿಣ, ಅಮೃತಬಳ್ಳಿ, ಜೇನು ಈ ಮೂರನ್ನು ಸೇರಿಸಿ ತಯಾರಿಸಿದ ಕಷಾಯವನ್ನು ಸೇವಿಸುವುದರಿಂದ ವಾತರಕ್ತ ರೋಗವು ನಾಶವಾಗುತ್ತದೆ.
* ಅರಿಷಿಣವನ್ನು ತ್ರಿಫಲ ಚೂರ್ಣದೊಂದಿಗೆ ಬೆರೆಸಿ, ತುಪ್ಪ ಮತ್ತು ಜೇನನ್ನು ಸೇರಿಸಿ ಕುಡಿಯುವುದರಿಂದ ರಕ್ತ ಹೀನತೆಯಿಂದ ಬಳಲುತ್ತಿರುವವರಿಗೆ ಒಳ್ಳೆಯದು.
* ಹರಿದ್ರಾ ಚೂರ್ಣವನ್ನು ನೀರಿನಲ್ಲಿ ಬೆರೆಸಿ, ಅದಕ್ಕೆ ಸ್ವಲ್ಪ ಪ್ರಮಾಣದ ಹುಣಸೆ ಎಲೆಯ ರಸವನ್ನು ಸೇರಿಸಿ ಕುಡಿಯುವುದರಿಂದ ಸಿಡುಬು ರೋಗಕ್ಕೆ ಒಳ್ಳೆಯದು.
* ಸಂಧಿವಾತ ನಿವಾರಣೆಗಾಗಿ ಅರಿಷಿಣ ಚೂರ್ಣ ಮತ್ತು ಶುಂಠಿಯನ್ನು ಸಮಾನ ಭಾಗದಲ್ಲಿ ತೆಗೆದುಕೊಂಡು ಹಾಲಿನ ಜೊತೆಗೆ ಸೇವಿಸಬೇಕು.
* ಅರಿಷಿಣ ಬೇರನ್ನು ಜೇನುತುಪ್ಪದಲ್ಲಿ ತೇದುಕೊಟ್ಟರೆ ಮಕ್ಕಳು ಹಾಸಿಗೆಯಲ್ಲಿ ಮೂತ್ರ ವಿಸರ್ಜನೆ ಮಾಡುವುದನ್ನು ತಡೆಗಟ್ಟಬಹುದು.
* ಹೃದಯ ನೋವಿನ ನಿವಾರಣೆಗಾಗಿ ಅರ್ಧ ಚಮಚ ಅರಿಷಿಣ ಪುಡಿಗೆ ಒಂದು ಚಮಚ ಕಲ್ಲು ಸಕ್ಕರೆ ಸೇರಿಸಿ ನುಂಗಬೇಕು.
* ಅರಿಷಿಣ ಬೇರನ್ನು ಸುಟ್ಟು ಅದರ ಚೂರ್ಣವನ್ನು ಲೋಳೇರಸದಲ್ಲಿ ಬೆರೆಸಿ ಕುಡಿಯುವುದರಿಂದ ಮೂಲ ವ್ಯಾಧಿ ನಿವಾರಣೆ.
* ಅರಿಷಿಣ ಬೇರು, ಒಳ್ಳೆ ಮೆಣಸು, ಅತಿಮಧುರ, ಅಮೃತ ಬಳ್ಳಿ ಇವುಗಳನ್ನು ಸಮತೂಕದಲ್ಲಿ ಸೇರಿಸಿ ಮಾಡಿದ ಪುಡಿಯ ಕಷಾಯವನ್ನು ಕುದಿಸಿ ಕುಡಿದರೆ ಹಳೆಯ ನೆಗಡಿ, ಜ್ವರ, ಕೆಮ್ಮು, ತಲೆನೋವುಗಳು ಗುಣವಾಗುತ್ತದೆ.
* ಬೇರಿನ ಪುಡಿ ಮಾಡಿ ನೀರಿನಲ್ಲಿ ಕುದಿಸಿ, ಆ ನೀರಿನಿಂದ ದಿನದಲ್ಲಿ ಕೆಲವು ಸಲ ಕಣ್ಣನ್ನು ಒರೆಸಿದರೆ ಕೆಂಗಣ್ಣು ರೋಗವು ಗುಣವಾಗುತ್ತದೆ.

☆





## ಶ್ರೀ ಸಿದ್ಧಗಂಗಾ ಮಠ, ತುಮಕೂರು

### ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 464. | ಶ್ರೀ ಬಿ.ಎಸ್.ಕೆ. ಸನಿಲ್ ಥಾಣೆ, ಮಹಾರಾಷ್ಟ್ರ | 10,000.00 |
| 465. | ಶ್ರೀ ನಾರಾಯಣರೆಡ್ಡಿ ಬೆಂಗಳೂರು. | 1,000.00 |
| 466. | ಶ್ರೀ ಕೆ.ಪಿ. ಉಷಾರಾಣಿ ಮತ್ತು ಕೆ.ಇ. ಪ್ರಕಾಶ್ ಕೊನೆಕೋಬಿ | 1,000.00 |
| 467. | ಶ್ರೀ ಎಂ. ಮಂಜುನಾಥಶೆಟ್ಟಿ ಬೆಂಗಳೂರು. | 1,001.00 |
| 468. | ಶ್ರೀಮತಿ ಸುಶೀಲಮ್ಮ ಸಿ.ಎಸ್. ಬೆಂಗಳೂರು. | 10,005.00 |
| 469. | ಶ್ರೀ ಸೂರ್ಯಪ್ರಕಾಶ್ ಬೆಂಗಳೂರು. | 1,000.00 |
| 470. | ಶ್ರೀ ಶಿವಪ್ಪ ಕೊಟ್ರಪ್ಪ ಗಘುಡ್ ರಾಣೆಬೆನ್ನೂರು | 2,000.00 |
| 471. | ಶ್ರೀ ಕೆ.ಟಿ. ಹನುಮಂತಯ್ಯ ಬೆಂಗಳೂರು. | 501.00 |
| 472. | ಶ್ರೀ ಸಿದ್ಧಬಸಪ್ಪ ಉಡುವಿಗೆರೆ | 1010.00 |
| 473. | ಶ್ರೀ ಎಸ್.ಪಿ. ರುದ್ರಪ್ಪ ಉದೇವಾರ | 1,500.00 |
| 474. | ಶ್ರೀ ಬಿ.ಎನ್.ಎಸ್. ಆರಾಧ್ಯ ಬೆಂಗಳೂರು. | 1,000.00 |
| 475. | ಶ್ರೀ ಹೆಚ್.ಎಂ. ನಾಗರಾಜ ದಾವಣಗೆರೆ | 1,000.00 |
| 476. | ಶ್ರೀ ಡಿ.ಹೆಚ್. ಶ್ಯಾಮಸುಂದರರಾವ್ ಬೆಂಗಳೂರು. | 10,001.00 |
| 477. | ಶ್ರೀ ಕಾಳೇಗೌಡ ಮಂಡ್ಯ | 1,000.00 |
| 478. | ಶ್ರೀ ಎಲ್. ರೇವಣ್ಣಸಿದ್ಧಯ್ಯ ಬೆಂಗಳೂರು. | 10,010.00 |
| 479. | ಶ್ರೀ ಎಂ.ಎಸ್. ಮಹದೇವಮ್ಮ ಬೆಂಗಳೂರು. | 1,000.00 |
| 480. | ವಿದ್ವಾನ್ ಶ್ರೀ ಕೆ.ಎಂ. ರೇವಣಸಿದ್ಧಯ್ಯ ಮೈಸೂರು | 2,000.00 |
| 481. | ಶ್ರೀ ವೈ.ಎಂ. ವಿರೂಪಾಕ್ಷಪ್ಪ ಹಾವೇರಿ | 1,000.00 |
| 482. | ಶ್ರೀ ಟಿ.ಎನ್. ಮನೋಜ್‌ಕುಮಾರ್ ತಿಪಟೂರು | 1,000.00 |
| 483. | ಶ್ರೀ ಎಸ್. ಸೋಮಣ್ಣ ವೈ.ಎನ್. ಹೊಸಕೋಟೆ | 1,000.00 |
| 484. | ಶ್ರೀ ಕೆ. ನಾಗರಾಜ್ ಬೆಂಗಳೂರು | 2,000.00 |
| 485. | ಶ್ರೀ ಎಸ್. ಕುಮಾರಸ್ವಾಮಿ ಬೆಂಗಳೂರು | 1,000.00 |
| 481. | ಶ್ರೀ ಕೆ.ಎಂ. ವಿರೂಪಾಕ್ಷಪ್ಪ ಎಸ್. ಕಲ್ಲಹಳ್ಳಿ | 1,001.00 |
| 482. | ಶ್ರೀ ಗುರುಬಸಪ್ಪ ಸೋಗಿಲು | 2,000.00 |
| 483. | ಶ್ರೀ ಕರಿಸಿದ್ಧಯ್ಯ ತಿಪಟೂರು | 3,000.00 |
| 484. | ಶ್ರೀಮತಿ ಮಂಜುಳ ಮಹದೇವ ತೋಟದ್ ಬೆಂಗಳೂರು | 5,000.00 |
| 485. | ಶ್ರೀ ಎಸ್.ಎಂ. ಮಲ್ಲೇಶಪ್ಪ ಹಾಸನ | 2,000.00 |
| 486. | ಶ್ರೀ ಟಿ. ಚಂದ್ರಶೇಖರಯ್ಯ ತುಮಕೂರು | 1,500.00 |
| 487. | ಶ್ರೀ ಪ್ರಪ್ಯತ್ತಿನಿ ದೀಪಕ್ ತುಮಕೂರು | 6,000.00 |
| 488. | ಶ್ರೀ ಬಿ.ಆರ್. ಗೋವಿಂದರಾಜು ತುಮಕೂರು | 5,000.00 |
| 489. | ಶ್ರೀ ರಾಜಶೇಖರ ಹೇಮಸಾಗರ ಮತ್ತು ಕುಟುಂಬ ಬೆಂಗಳೂರು | 5,005.00 |
| 490. | ಶ್ರೀ ಸತ್ಯನಾರಾಯಣ ಬೆಂಗಳೂರು | 2,500.00 |
| 491. | ಶ್ರೀ ಬಿ.ಹೆಚ್. ಶಿವಶಂಕರಯ್ಯ ಬೆಂಗಳೂರು | 1,110.00 |
| 492. | ಶ್ರೀ ಪರಮೇಶ್ವರಯ್ಯ ರಾಣೇಬೆನ್ನೂರು | 1,000.00 |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| 493. | ಶ್ರೀ ಚಂದ್ರಪ್ಪ<br>ಬೆಂಗಳೂರು | 3,000.00 |
| 494. | ಶ್ರೀ ಕೆ.ಎಸ್. ಮಹದೇವಪ್ಪ<br>ಬೆಂಗಳೂರು | 1,000.00 |
| 495. | ಶ್ರೀ ಕೆ.ಬಿ. ಮುದ್ದಯ್ಯ<br>ತುಮಕೂರು | 1,001.00 |
| 496. | ಶ್ರೀ ಪ್ರಭುರಾವ್<br>ಬೆಂಗಳೂರು | 10,005.00 |
| 497. | ಶ್ರೀ ರಾಮರಾಧ್ಯ<br>ಮೈಸೂರು | 1,000.00 |
| 498. | ಶ್ರೀ ಈಶ್ವರ ಕೆ.ಎ.ಎಸ್<br>ಬೆಂಗಳೂರು | 25,005.00 |
| 499. | ಶ್ರೀ ಜಗದೀಶ್ ವಿ.<br>ಪರಿಣಾಮಿಪುರ | 5,000.00 |
| 500. | ಶ್ರೀ ಡಿ.ಎನ್. ಪ್ರಭುಶಂಕರ್<br>ಬೆಂಗಳೂರು | 1,100.00 |
| 501. | ಶ್ರೀ ಉಮೇಶ್‌ಚಂದ್ರ<br>ತುಮಕೂರು | 1,008.00 |
| 502. | ಶ್ರೀ ಶಿವಾನಂದ್<br>ತುಮಕೂರು | 2,000.00 |
| 503. | ಶ್ರೀ ಹೆಚ್.ಎಂ. ಬಸಪ್ಪ<br>ಬೆಂಗಳೂರು. | 2,000.00 |
| 504. | ಶ್ರೀ ಸಿದ್ಧವೀರಮ್ಮ<br>ಬೆಂಗಳೂರು. | 1,000.00 |
| 505. | ಶ್ರೀ ಬಿ.ಎಂ. ಬಸವರಾಜು<br>ಮಂಡ್ಯ | 1,000.00 |
| 506. | ಶ್ರೀ ಲಕ್ಷ್ಮಣ<br>ಶ್ರೀನಿವಾಸಪುರ | 1,000.00 |
| 507. | ಶ್ರೀ ಕಿರಣ್‌ಕುಮಾರ್ ಪಾಟೀಲ್<br>ಬೆಂಗಳೂರು. | 10,000.00 |
| 508. | ಶ್ರೀ ಎಸ್.ಆರ್. ನಾಗರಾಜು<br>ಬೆಂಗಳೂರು. | 10,000.00 |
| 509. | ಶ್ರೀ ಜಯಮ್ಮ ದಾನಪ್ಪ<br>ಚಿಕ್ಕನಾಯಕನಹಳ್ಳಿ | 1,000.00 |
| 510. | ಶ್ರೀ ಎಂ. ಪರಮಶಿವಯ್ಯ<br>ತುಮಕೂರು | 10,001.00 |
| 511. | ಶ್ರೀ ಕೆ. ಬಸವಲಿಂಗಯ್ಯ<br>ಬೆಂಗಳೂರು. | 5,001.00 |
| 512. | ಶ್ರೀ ಬಿ.ಆರ್. ನಂದೀಶ್<br>ಬೆಂಗಳೂರು | 1,000.00 |
| 513. | ಶ್ರೀ ಜಿ. ಪುರುಷೋತ್ತಮ್<br>ಬೆಂಗಳೂರು | 1,000.00 |
| 514. | ಶ್ರೀ ಸರ್ವಮಂಗಳಮ್ಮ<br>ಬೆಂಗಳೂರು | 1,000.00 |
| 515. | ಶ್ರೀ ಹೆಚ್.ವಿ. ರಾಜಣ್ಣ<br>ಬೆಂಗಳೂರು | 1,000.00 |
| 516. | ಶ್ರೀ ಡಿ.ಎಸ್. ಹೇಮಂತ್<br>ದಾವಣಗೆರೆ | 50,000.00 |
| 517. | ಶ್ರೀ ಎಸ್. ನಂಜುಂಡಯ್ಯ<br>ಗುಬ್ಬಿ | 1,000.00 |
| 518. | ಶ್ರೀ ಜಿ.ವಿ. ರಾಜು<br>ಬೆಂಗಳೂರು | 1,000.00 |
| 519. | ಶ್ರೀ ಯಶವಂತಗೌಡ<br>ಬೆಂಗಳೂರು | 1,000.00 |
| 520. | ಶ್ರೀ ಸ್ನೇಹ ಆರ್. ಧನ್ಯ ಆರ್.<br>ಬೆಂಗಳೂರು | 1,100.00 |
| 521. | ಶ್ರೀ ಆರ್. ಪುಷ್ಪ<br>ಬೆಂಗಳೂರು | 1,000.00 |
| 522. | ಶ್ರೀ ಲಿಖಿತ್ D/o ದೇವರಾಜು<br>ಬೆಂಗಳೂರು | 1,000.00 |
| 523. | ಶ್ರೀ ಅಂಜಿ S/o ಲೇಟ್ ಅನಂತಯ್ಯ<br>ತುಮಕೂರು | 1,000.00 |
| 524. | ಶ್ರೀ ಭರತ್ ಬಿ. ಶಿಲ್ಪ<br>ತುಮಕೂರು | 1,000.00 |
| 525. | ಶ್ರೀ ಎ. ಬಸವರಾಜು<br>ಬೆಂಗಳೂರು | 1,000.00 |
| 526. | ಎಂ.ಜೆ. ಭೈರವಿ D/o ಗಣೇಶ್<br>ಬೆಂಗಳೂರು | 1,000.00 |
| 527. | ಶ್ರೀ ಆರ್. ಭದ್ರಾಚಾರ್<br>ಬೆಂಗಳೂರು | 1,000.00 |
| 528. | ಶ್ರೀ ಎಸ್. ಮಂಜುನಾಥ್<br>ಕಾಳಿಪಾಳ್ಯ | 1,000.00 |
| 529. | ಸುಶ್ಮ ಕೆ.ಆರ್. ಪೂರ್ಣಿಮ<br>ಕಾಳಿಪಾಳ್ಯ | 1,000.00 |
| 530. | ಶ್ರೀ ಶಾಂತವೀರಪ್ಪ<br>ಬೆಂಗಳೂರು | 2,000.00 |

ಮುಂದುವರೆಯುತ್ತದೆ

RNI No. 17139/69

"Siddaganga" Monthly - Postal Reg. No. L2/RNP/385/TMR/2015-17




ತುಮಕೂರು ಪ್ರಜಾಪ್ರಗತಿ ಟಿ.ವಿ. ಉದ್ಘಾಟನಾ ಸಮಾರಂಭ
ಪರಮಪೂಜ್ಯ ಶ್ರೀ ಶ್ರೀಗಳು, ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯನವರು
ಪೂಜ್ಯ ಶ್ರೀ ವೀರೇಶಾನಂದ ಸ್ವಾಮಿಗಳು, ಶ್ರೀ ಎಸ್. ನಾಗಣ್ಣ,
ಸಂಸದರು, ಶಾಕರುಗಳು



ತುಮಕೂರು ವಿಶ್ವವಿದ್ಯಾಲಯದ ಸಮಾರಂಭದಲ್ಲಿ
ಪೂಜ್ಯ ಶ್ರೀ ಶ್ರೀಗಳು, ಪೂಜ್ಯ ಶ್ರೀ ದಲೈಲಾಮ್‌ರವರು
ಪೂಜ್ಯ ಶ್ರೀ ಜಪಾನಂದ ಶ್ರೀಗಳವರು, ಸಚಿವರುಗಳಾದ
ಶ್ರೀ ಆಂಜನೇಯನವರು, ಶ್ರೀ ಜಯಚಂದ್ರರವರು



ಶ್ರೀ ಅರುಣ್ ಚಕ್ರವರ್ತಿ, ಐ.ಜಿ.ಪಿ., ಶ್ರೀ ರಮಣಗುಪ್ತ, ಎಸ್.ಪಿ.
ಶ್ರೀ ಲಕ್ಷ್ಮಣ್, ಎ.ಎಎಸ್.ಪಿ. ಅವರುಗಳು
ಶ್ರೀ ಶ್ರೀಗಳವರ ಆಶೀರ್ವಾದ ಪಡೆದ ಸಂದರ್ಭ



ಗಣರಾಜ್ಯೋತ್ಸವದ ಸಮಾರಂಭದಲ್ಲಿ ಧ್ವಜಾರೋಹಣ.
ಸಚಿವ ಶ್ರೀ ಜಯಚಂದ್ರ ವಂದನೆ ಸ್ವೀಕರಿಸುತ್ತಿರುವುದು.
ಉಪಸ್ಥಿತಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು.



ಜನವರಿ 15 ರಂದು ಅಟವಿ ಸ್ವಾಮಿಗಳ ಪ್ರಶಸ್ತಿ ಪ್ರದಾನ
ಸಮಾರಂಭದಲ್ಲಿ ಪ್ರಶಸ್ತಿ ಸೇವಾಕರ್ತರಾದ ಶ್ರೀಮತಿ ರೇಣುಕಾ
ಪರಮೇಶ್ ಮತ್ತು ಕುಟುಂಬದವರಿಂದ ಶ್ರೀ ಶ್ರೀಗಳವರಿಗೆ
ಭಕ್ತಿ ಸಮರ್ಪಣೆ



ಜಾತ್ರಾ ಸಂದರ್ಭದಲ್ಲಿ ಉತ್ತಮ ರಾಸುಗಳ
ಶ್ರೀ ಎಂ. ರೇಣುಕಾರಾಧ್ಯ,
ಶ್ರೀ ಕೆ.ಎಚ್. ಶಿವರುದ್ರಯ್ಯನವರು ಮತ್ತು
ಶ್ರೀ ಬಸವರಾಜು

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru-10. Ph : 23404232